# ಪಾರ್ವತೀಬಾಯಿ ಆಠವ್ಳೆ

ಎಚ್. ವೈ. ಸರಸ್ವತಮ್ಮ

೧೯೪೦

ಪ್ರಕಾಶಕರು:
ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು ಸಿಟಿ

# ಸಾವಿತ್ರೀಬಾಯಿ ಫುಲೆ

ಎಚ್. ಸೈ. ಸರಸ್ವತಿ

೧೯೪೦

ಪ್ರಕಾಶಕರು :
ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು ಸಿಟಿ

# ಮುನ್ನುಡಿ

ಜನಾಂಗದ ಉನ್ನತಿಗೆ ಜೀವನ ಚರಿತ್ರೆಗಳು ಬಹಳ ಉಪಕಾರಿಗಳು. ಜೀವನಚರಿತ್ರೆಗಳನ್ನು ಓದುವುದರಿಂದ ಜ್ಞಾನವು ಹೆಚ್ಚುವುದು. ತಮ್ಮ ತಮ್ಮ ಜೀವನಗಳನ್ನು ಸಫಲಗೊಳಿಸುವುದಕ್ಕೆ ಬೇಕಾದ ಸ್ಫೂರ್ತಿಯು ದೊರಕುವುದು. ಪ್ರಪಂಚದ ಕಷ್ಟಗಳೆಂಬ ಬಿರುಗಾಳಿಗೆ ಸಿಕ್ಕಿ ನಂದಿಹೋದ ನಿರಾಶಾಮಯವಾದ ಜೀವನ ಜ್ಯೋತಿಗಳನ್ನು ಉತ್ಸಾಹದ ಕಿಡಿಯಿಂದ ಮತ್ತೆ ಅಂಟಿಸಿ ಪ್ರಜ್ವಲಿಸುವಂತೆ ಮಾಡುವುದಕ್ಕೆ ಮಹಾಪುರುಷರ ಮತ್ತು ಆದರ್ಶಮಹಿಳೆಯರ ಜೀವನಚರಿತ್ರೆಗಳನ್ನು ಓದುವುದು ಅತ್ಯಂತ ಅವಶ್ಯಕವಾದುದು.

ಪಾರ್ವತೀಬಾಯಿ ಆಠವ್ಳೆಯವರ ಜೀವನವಂತೂ ಪ್ರತಿಯೊಬ್ಬ ಭಾರತಪುತ್ರನೂ, ಭಾರತಪುತ್ರಿಯೂ ಓದಿ, ಮನನಮಾಡಿ ಅನುಸರಿಸಬೇಕಾದ ಆದರ್ಶಚರಿತ್ರೆ. ಅತಿಸಾಮಾನ್ಯ ಕುಟುಂಬದಲ್ಲಿ ಜನ್ಮವೆತ್ತಿ, ಅವಿದ್ಯಾವಂತಳಾಗಿದ್ದು, ವಿಧವೆಯಾಗಿ, ಕರ್ತವ್ಯವನ್ನು ಮರೆಯದೆ, ಪ್ರೊಫೆಸರ್ ಕರ್ವೆಯವರ ಹಾದಿಯನ್ನು ಹಿಡಿದು, ಮಗನಿಗೆ ವಿದ್ಯಾಭ್ಯಾಸವನ್ನು ಮಾಡಿಸುವುದರ ಜೊತೆಗೆ ವಯಸ್ಸಾದಮೇಲೆ ತಾನೂ ಸಹ ವ್ಯಾಸಂಗ ಮಾಡುವುದಕ್ಕೆ ಮೊದಲಿಟ್ಟು, ಸ್ವಲ್ಪವೂ ಅರಿಯದ ಕಾಲದಲ್ಲಿ ವಿದೇಶವಾದ ಅಮೆರಿಕಾಕ್ಕೆ ಪ್ರಯಾಣಮಾಡಿ, ಅನೇಕ ಕಷ್ಟಗಳಿಗೊಳಗಾಗಿ, ಎದೆಗುಂದದೆ, ಧ್ಯೇಯವನ್ನು ಬಿಡದೆ, ಧೈರ್ಯದಿಂದ ಕಾರ್ಯಸಿದ್ಧಿಯನ್ನು ಪಡೆದ ಕರ್ಮಯೋಗಿನಿಯಾಕೆ. ಅಂತಹವರ ಜೀವನವನ್ನು ಶ್ರೀಮತಿ ಎಚ್. ವೈ. ಸರಸ್ವತಿಯವರು ಕನ್ನಡದಲ್ಲಿ ಬರೆದು ಅದಕ್ಕೆ ನನ್ನ ಮುನ್ನುಡಿಯು ಬೇಕೆಂದು ಕೇಳಿದಾಗ ಅವರ ಕೋರಿಕೆಯನ್ನು ನಿರಾಕರಿಸುವುದಕ್ಕೆ ನನಗೆ ಸಾಧ್ಯವಾಗಲಿಲ್ಲ. ಅದೂ ಅಲ್ಲದೆ ವಿಧವಾಶ್ರಮವನ್ನು ಸ್ಥಾಪಿಸಿದ ಪ್ರೊ|| ಕರ್ವೆಯವರೂ ಅವರ ಸಹಕಾರೀ ಸಹೋದ್ಯೋಗಿಗಳೂ ಆದ ಶ್ರೀಮತಿ ಪಾರ್ವತೀಬಾಯಿ ಆಠವ್ಳೆಯವರೂ ನನ್ನ ಚಿರಪರಿಚಿತ ಗಣ್ಯಮಿತ್ರರಾಗಿರುವುದರಿಂದ

ಇದಕ್ಕೆ ಮುನ್ನುಡಿಯನ್ನು ಕೊಡುವುದಕ್ಕೆ ನನಗೆ ಬಹಳ ಆನಂದವೂ, ಅಭಿಮಾನವೂ ಉಂಟಾಯಿತು. ಈ ಉದ್ಯಮವನ್ನು ಕೈಗೊಂಡ ಲೇಖಕರನ್ನು ನಾನು ಅಭಿನಂದಿಸುತ್ತೇನೆ.

ಕನ್ನಡದಲ್ಲಿ ಜೀವನಚರಿತ್ರೆಗಳು ಬಹಳ ಕಡಿಮೆ. ಆಂಗ್ಲ ಸಾಹಿತ್ಯದಲ್ಲಿ ಜೀವನಚರಿತ್ರೆಗಳಿಗೆ ಬಹಳ ಮುಖ್ಯವಾದ ಸ್ಥಾನವಿದೆ. ಅಷ್ಟೇ ಅಲ್ಲ, ಹಿಂದೀ, ಮರಾಠೀ, ಬಂಗಾಲೀ ಮೊದಲಾದ ಭಾಷೆಗಳಲ್ಲೂ ಜೀವನ ಚರಿತ್ರೆಗಳು ಸಾಕಷ್ಟು ಪ್ರಕಾಶಿತವಾಗಿವೆ. ಆದರೆ ಕನ್ನಡದಲ್ಲಿ ಈ ವಿಧವಾದ ಸಾಹಿತ್ಯವು ಇನ್ನೂ ಬಾಲ್ಯಾವಸ್ಥೆಯಲ್ಲಿಯೇ ಇದೆ. ಹೀಗಿರುವಲ್ಲಿ ಕನ್ನಡಿಗರು ಲೇಖಕರನ್ನು ಪ್ರೋತ್ಸಾಹಿಸಿ ಪುಸ್ತಕವು ನಾಲ್ಕಾರು ಬಾರಿ ಮುದ್ರಣವಾಗುವಂತೆ ಮಾಡುವರೆಂಬುದೇ ನನ್ನ ಹಾರೈಕೆ. ಭಾಷೆಯು ಸರಳವಾಗಿಯೂ ಮುದ್ರಣವು ಸುಂದರವಾಗಿಯೂ ಇರುವ ಪುಸ್ತಕವು ಆಕರ್ಷಣೀಯವಾಗಿದೆ.

ಬೆಂಗಳೂರು,
೨೪ನೆಯ ಮಾರ್ಚ್, ೧೯೪೦

**ಲೋಕಸುಂದರೀ ರಾಮನ್.**

# ಬಿನ್ನಹ

ಶ್ರೀ|| ಪಾರ್ವತೀಬಾಯಿ ಆಠವ್‌ಳೆಯವರು ಮರಾಠಿಯಲ್ಲಿ ಬರೆದ ಆತ್ಮಕಥೆಯನ್ನು ಅಮೆರಿಕದ ರೆವರೆಂಡ್ ಜಸ್ಟಿನ್ ಅಬ್ಬಾಟರು ಇಂಗ್ಲಿಷ್ ಭಾಷೆಯಲ್ಲಿ ಬರೆದರು. ಆ ಪುಸ್ತಕವನ್ನು ಓದುವ ಸುಯೋಗವು ಕೆಲವು ತಿಂಗಳ ಹಿಂದೆ ನನಗೆ ಲಭಿಸಿತು. ಓದಿದ ಹಾಗೆಲ್ಲ ಶ್ರೀ|| ಪಾರ್ವತೀ ಬಾಯಿಯವರ ವಿದ್ಯಾಕಾಂಕ್ಷೆಯೂ, ಸಾಹಸವೂ, ಹಿಂದೂ ವಿಧವೆಯ ರಂಥ ದೀನಜನರಿಗಾಗಿ ಆಕೆ ಸಲ್ಲಿಸುತ್ತಿರುವ ಸೇವೆಯೂ ಆಶ್ಚರ್ಯ ವನ್ನುಂಟುಮಾಡಿದುವು.

ನೆರೆನಾಡಾದ ಮಹಾರಾಷ್ಟ್ರದ ಈ ಸಹೋದರಿಯ ಪರಿಚಯವನ್ನು ಕನ್ನಡಿಗರಿಗೆ ಉಂಟುಮಾಡಬೇಕೆಂದು ನನ್ನ ಪೂಜ್ಯ ಸೋದರಮಾವಂದಿ ರಾದ ಶ್ರೀಯುತ ಮೋಕ್ಷಗುಂಡಂ ಕೃಷ್ಣಮೂರ್ತಿಯವರು ಸೂಚಿಸಿದರು. ಅವರ ನಿರ್ಬಂಧದಿಂದಲೂ, ಪ್ರೋತ್ಸಾಹದಿಂದಲೂ ಈ ಕಥೆಯನ್ನು ಕನ್ನಡದಲ್ಲಿ ಬರೆಯುವ ಪ್ರಯತ್ನವನ್ನು ಮಾಡಿದೆನು. ಕೈ ಬರಹದ ಪ್ರತಿಯನ್ನು ಪರಿಶೀಲಿಸಿ ಅಲ್ಲಲ್ಲಿ ಉಪಯುಕ್ತವಾದ ತಿದ್ದುಪಾಟುಗಳನ್ನು ಸೂಚಿಸಿದವರು ನನ್ನ ಪೂಜ್ಯ ತಂದೆಯವರಾದ ತೀರ್ಥರೂಪ ವಾಜ ಪೇಯಂ ವೆಂಕಟಸುಬ್ಬಯ್ಯನವರು. ಆದರೆ, ಅಚ್ಚಿನಲ್ಲಿದ್ದ ಪುಸ್ತಕವು ಹೊರಹೊರಡುವುದರೊಳಗಾಗಿಯೇ ಈ ಹಿರಿಯರೀರ್ವರೂ ಕಣ್ಮರೆ ಯಾದುದು ಎಂದೆಂದಿಗೂ ಮರೆಯಲಾರದಂತಹ ದುಃಖದ ಘಟನೆ. ಈಗಲೂ ಈ ಗ್ರಂಥದಿಂದ ಏನಾದರೂ ಪ್ರಯೋಜನವಾದರೆ ಅದರಿಂದ ಆ ಕೀರ್ತಿಶೇಷರ ಆತ್ಮಗಳು ತೃಪ್ತಿಹೊಂದಬಹುದೆಂದು ಭಾವಿಸುತ್ತೇನೆ.

ಈ ಅನುವಾದಕ್ಕೆ ತಮ್ಮ ಅನುಮತಿಯನ್ನೂ ಆಶೀರ್ವಾದವನ್ನೂ ಕರುಣಿಸಿದ ಶ್ರೀ|| ಪಾರ್ವತೀಬಾಯಿ ಆಠವ್‌ಳೆಯವರಿಗೆ ಅತ್ಯಂತ ಕೃತಜ್ಞ ಳಾಗಿರುವೆನು.

ಬೆಂಗಳೂರು ನಗರದಲ್ಲಿ ಸೇವಾಸದನವೆಂಬ ಹಿಂದೂ ವಿಧವೆಯರ ಶರಣಾಲಯವನ್ನು ಸ್ಥಾಪಿಸಿ ಯಶಸ್ವಿಯಾಗಿ ನಿರ್ವಹಿಸುತ್ತ, ಸ್ವಾರ್ಥ

ಲೇಶವೂ ಇಲ್ಲದೆ ಹಗಲಿರುಳೂ ದೀನಜನೋದ್ಧಾರ ಕಾರ್ಯಗಳಲ್ಲಿಯೇ ಶ್ರಮಿಸುತ್ತ ಆದರ್ಶದಂತಿರುವ ಅಂತರ ರಾಷ್ಟ್ರೀಯ ಮಹಾವ್ಯಕ್ತಿಗಳಾದ ಶ್ರೀಮತಿ ಲೇಡಿ ಲೋಕಸುಂದರಿ ರಾಮರವರು ತಮಗೆ ಎಷ್ಟೋ ಅನಿವಾರ್ಯಗಳಿದ್ದಾಗ್ಯೂ ಶ್ರೀ|| ಪಾರ್ವತೀಬಾಯಿಯವರ ಮೇಲಿನ ಗೌರವದಿಂದ ಈ ಪುಸ್ತಕವನ್ನು ಚೆನ್ನಾಗಿ ಪರಿಶೀಲಿಸಿ ತಮ್ಮ ಅಮೌಲ್ಯವಾದ ಮುನ್ನುಡಿಯನ್ನು ಅನುಗ್ರಹಿಸಿ ನನ್ನನ್ನು ಚಿರಋಣಿಯನ್ನಾಗಿ ಮಾಡಿದ್ದಾರೆ. ಇದು ನನಗೆ ಪರಮಾನುಗ್ರಹವಾಗಿದೆ. ಅವರಿಗೆ ಅತ್ಯಂತ ವಿನಯಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ.

ಈ ಪುಸ್ತಕವು ಈ ರೂಪಕ್ಕೆ ಬರಲು ಸಹಕಾರವನ್ನು ನೀಡಿದವರೆಲ್ಲರಿಗೂ ಕೃತಜ್ಞತೆಯ ವಂದನೆಗಳನ್ನರ್ಪಿಸುತ್ತಿರುವೆನು.

ಬೆಂಗಳೂರು,
೨೪ನೆಯ ಮಾರ್ಚಿ, ೧೯೪೦ } ಎಚ್. ವೈ. ಸರಸ್ವತಿ.

# ವಿಷಯ ಸೂಚೀ



ಹಿಂದೂ ವಿಧವೆಯರ ಕಷ್ಟಗಳನ್ನು ನೀಗುವುದಕ್ಕಾಗಿ
ದುಡಿಯುತ್ತಿರುವ
**ಶ್ರೀ|| ಪಾರ್ವತೀಬಾಯಿ ಆಠವ್ಳೆ**



ಹಿಂದೂ ವಿತಂತು ಶರಣಾಲಯ ಮತ್ತು
ಮಹಿಳಾ ವಿಶ್ವವಿದ್ಯಾಲಯಗಳ ಸಂಸ್ಥಾಪಕರಾದ
**ಪ್ರೊ|| ಕರ್ವೆಯವರು**

# ಪಾರ್ವತೀಬಾಯಿ ಆಠವ್ಳೆ

## ೧. ತಂದೆ ತಾಯಿಗಳು ಮತ್ತು ಬಾಲ್ಯ

ಕೊಂಕಣ ದೇಶವು ಬೊಂಬಾಯಿಯ ದಕ್ಷಿಣಕ್ಕೆ ಪಶ್ಚಿಮ ಘಟ್ಟಗಳಿಗೂ ಸಮುದ್ರಕ್ಕೂ ಮಧ್ಯೆ ಸುಮಾರು ಐವತ್ತು ಮೈಲಿಗಳ ಅಗಲವುಳ್ಳ ಪ್ರದೇಶ. ರತ್ನಗಿರಿ ಜಿಲ್ಲೆಯು ಈ ಕೊಂಕಣ ದೇಶಕ್ಕೆ ಸೇರಿದುದು. ರತ್ನಗಿರಿ ಜಿಲ್ಲೆಯಲ್ಲಿ ದೇವರುಕ್ ಎಂಬ ಗ್ರಾಮ. ಅಲ್ಲಿ ಬಾಲಕೃಷ್ಣ ಕೇಶವ ಜೋಷಿ ಎಂಬ ಕೊಂಕಣಸ್ಥ ಬ್ರಾಹ್ಮಣನು ವಾಸವಾಗಿದ್ದನು. ಆತನಿಗೆ ಊರ ಮುಂದೆ ಸ್ವಲ್ಪ ಗದ್ದೆ, ತಾನು ವಾಸವಾಗಿದ್ದ ಮಣ್ಣಿನ ಮನೆ ಇವುಗಳೇ ಆಸ್ತಿ. ಅದರ ಜತೆಗೆ ಚಿಲ್ಲರೆ ವ್ಯಾಪಾರವನ್ನು ಇಟ್ಟುಕೊಂಡಿದ್ದನು. ಆತನ ಪತ್ನಿಯು ಸಂಸಾರವನ್ನು ಬಹಳ ಸಾಮರ್ಥ್ಯದಿಂದ ನಿರ್ವಹಿಸಿಕೊಂಡು ಗಂಡನಿಗೆ ಅನುಕೂಲೆಯಾಗಿದ್ದಳು. ಈ ದಂಪತಿಗಳಿಗೆ ೧೮೭೦ನೆಯ ಇಸವಿಯಲ್ಲಿ ಒಂದು ಹೆಣ್ಣುಮಗು ಹುಟ್ಟಿತು. ಆ ಮಗುವೇ ಪಾರ್ವತೀ ಬಾಯಿ.

ಬಾಲಕೃಷ್ಣ ಕೇಶವ ಜೋಷಿಯವರು ಬಹಳ ಕರ್ಮಠರು. ಕುಲದೈವವಾದ ಶ್ರೀ ರಾಮನಲ್ಲಿ ಆತನಿಗೆ ವಿಶೇಷ ಭಕ್ತಿ. ಸದಾ ರಾಮನಾಮ ಪಾರಾಯಣ ಮಾಡುತ್ತಿದ್ದರು. ಹೀಗಿದ್ದರೂ ಆತನಿಗೆ ಹೀನ ಕುಲಜರಲ್ಲಿ ಬಹಳ ದಯೆ. ದೂರದಿಂದ ಭಾರವಾದ ಹೊರೆಗಳನ್ನು ಹೊತ್ತುಕೊಂಡು ಬಳಲಿ ಬಾಯಾರಿ ಬಂದ ಹಿಂದುಳಿದ ಪಂಗಡದವರಿಗೆ ಜೋಷಿಯವರು ಆದರದಿಂದ ಸಿಹಿ ನೀರು, ನೀರುಮಜ್ಜಿಗೆ, ಪುರಿ ಮುಂತಾದುವನ್ನು ಕೊಡುತ್ತಿದ್ದರು. ಕ್ರಮೇಣ ಇವರಿಗಾಗಿ ಮನೆಯ ಜಗುಲಿಯ ಮೇಲೆ ಒಂದು ಹಂಡೆಯಲ್ಲಿ ನೀರು ತುಂಬಿ, ಬಳಲಿ ಬಂದವರಿಗೆ ನೀರನ್ನು ಕೊಡುವುದೇ ಜೋಷಿಯವರ ಕೆಲಸವಾಗಿ ಹೋಯಿತು. ಮಡಿಯುಟ್ಟು ದೇವತಾರ್ಚನೆ ಮಾಡುತ್ತಿದ್ದಾಗ ಸಹ ಯಾರಾದರೂ ನೀರಿಗಾಗಿ 'ಬಾಬಾ' ಎಂದು ಕೂಗಿದರೆ ಆತನು ಕೂಡಲೆ ಎದ್ದು ಹೋಗಿ

ನೀರನ್ನು ಕೊಡುತ್ತಿದ್ದನು. ಜೋಷಿಯವರ ಈ ವರ್ತನೆಯನ್ನು ಊರಿನ ಬ್ರಾಹ್ಮಣರು ಬಹಳ ಕಟುವಾಗಿ ಖಂಡಿಸುತ್ತಿದ್ದರು. ಆದರೂ ಜೋಷಿಯವರು ಧೈರ್ಯಗೆಡದೆ "ಅವರಲ್ಲಿಯೂ ನನ್ನಲ್ಲಿಯೂ ಇರುವ ಪರಮಾತ್ಮನೊಬ್ಬನೇ; ಅವರು ನೀರಡಿಕೆಯನ್ನು ತೀರಿಸಿಕೊಂಡು ತೃಪ್ತರಾದರೆ ನಾನು ತೃಪ್ತನಾದಂತೆಯೇ" ಎಂದು ಶಾಂತವಾಗಿ ಹೇಳುತ್ತಿದ್ದರು. ಅಸ್ಪೃಶ್ಯರಿಗೆ ಮಾತ್ರವೇ ಅಲ್ಲದೆ ಮೊಹರಂ ಹಬ್ಬದಲ್ಲಿ ವೇಷಗಳನ್ನು ಧರಿಸಿ ಊರಿಂದೂರಿಗೆ ಹೋಗುತ್ತಿದ್ದ ಮುಸಲ್ಮಾನರನ್ನು ಕರೆದು ಅವರಿಗೆ ಪಾನಕ, ನೀರುಮಜ್ಜಿಗೆ, ಸಕ್ಕರೆ ಮುಂತಾದುವನ್ನು ಕೊಟ್ಟು ಕಳುಹಿಸುತ್ತಿದ್ದರು. ಅಲ್ಲದೆ ಊರಿಗೆ ಹೊಸದಾಗಿ ಬಂದ ಸಾಧು ಸಂತರು, ಸನ್ಯಾಸಿಗಳು, ಯಾತ್ರಾರ್ಥಿಗಳು ಮುಂತಾದವರಿಗೆ ಹಾಲು ಹಣ್ಣುಗಳನ್ನು ಕೊಟ್ಟು ಬಹಳ ಭಕ್ತಿಯಿಂದ ಆದರಿಸುತ್ತಿದ್ದರು.

ಹೀಗೆ ಜೋಷಿಯವರು ಸದಾ ಪರೋಪಕಾರದಲ್ಲಿಯೇ ಕಾಲವನ್ನು ಕಳೆಯುತ್ತಿದ್ದುದರಿಂದ ಸಂಸಾರದ ಕಡೆಗೆ ಅಷ್ಟು ಗಮನ ಕೊಡುತ್ತಿರಲಿಲ್ಲ. ಜೋಷಿಯವರ ಈ ಬಗೆಯ ವರ್ತನೆಯು ಆತನ ಪತ್ನಿಗೆ ಅಷ್ಟಾಗಿ ಹಿಡಿಸಲಿಲ್ಲ. ಆದರೆ ತನ್ನ ಮಾತೇನೂ ನಡೆಯುವಂತಿರಲಿಲ್ಲವಾಗಿ ಆಕೆಯು ಸುಮ್ಮನಿರಬೇಕಾಯಿತು. ಮನೆಯಲ್ಲಿ ಹನ್ನೊಂದು ಮಂದಿ ಮಕ್ಕಳನ್ನು ಸಾಕಬೇಕಾಗಿತ್ತು. ಅದರ ಜತೆಗೆ ದನಕರುಗಳ ಯೋಗಕ್ಷೇಮ ಮತ್ತು ಗದ್ದೆಯ ಕೆಲಸವನ್ನು ಸಹ ನೋಡಿಕೊಳ್ಳಬೇಕಾಗಿತ್ತು. ತಮ್ಮ ಬಡತನದ ದೆಸೆಯಿಂದ ಮಕ್ಕಳ ಊಟ ಉಪಚಾರಗಳಿಗೆ ಸ್ವಲ್ಪವೂ ಕುಂದಕ ಬಾರದಂತೆ ಬಹಳ ಕಷ್ಟಪಟ್ಟು ಸಂಸಾರವನ್ನು ದಕ್ಷತೆಯಿಂದ ನಿರ್ವಹಿಸುತ್ತಿದ್ದಳೆನ್ನಬಹುದು. ಹೆಣ್ಣುಮಕ್ಕಳಿಗೆ ಯೋಗ್ಯರಾದ ವರರನ್ನು ನೋಡಿ ಮದುವೆ ಮಾಡಿ ಅವರನ್ನು ಒಳ್ಳೆಯ ಸ್ಥಿತಿಗೆ ತರಬೇಕೆಂದು ಬಹಳ ತವಕಿಸುತ್ತಿದ್ದಳು.

# ೧. ವಿವಾಹ

ಪಾರ್ವತೀಬಾಯಿಗೆ ಹನ್ನೊಂದು ವರ್ಷವಾದರೂ ಮದುವೆ ಯಾಗಿರಲಿಲ್ಲ. ಆ ಕಾಲದಲ್ಲಿ ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ಆರೇಳು ವರ್ಷಗಳೊಳಗಾಗಿಯೇ ಮದುವೆ ಮಾಡಿಬಿಡುತ್ತಿದ್ದರು. ಪಾರ್ವತೀ ಬಾಯಿಯ ಅಕ್ಕಂದಿರಿಬ್ಬರಲ್ಲಿ ಏಳನೆಯ ವಯಸ್ಸಿನಲ್ಲೊಬ್ಬಳಿಗೂ ಒಂಭತ್ತನೆಯ ವಯಸ್ಸಿನಲ್ಲೊಬ್ಬಳಿಗೂ ಮದುವೆಯಾಗಿದ್ದಿತು.

ಆ ಗ್ರಾಮದಲ್ಲಿ ಗಂಡುಮಕ್ಕಳಿಗೇ ಪಾಠಶಾಲೆ ಇರಲಿಲ್ಲವೆಂದ ಮೇಲೆ ಹೆಣ್ಣುಮಕ್ಕಳಿಗೆಲ್ಲಿ! ಆ ಕಾಲದ ಹೆಣ್ಣುಮಕ್ಕಳ ವಿದ್ಯಾಭ್ಯಾಸ ವೆಂದರೆ ಕುಟ್ಟುವುದು, ಬೀಸುವುದು, ನೀರು ಸೇದುವುದು, ದೇವರ ಪೂಜೆಗೆ ಅಣಿಮಾಡುವುದು, ಕಸ ಗುಡಿಸುವುದು, ಎಂಜಲು ಗೋಮೆ ಯನ್ನು ಮಾಡುವುದು, ಮಕ್ಕಳಿಗೆ ನೀರೆರೆಯುವುದು, ಮಕ್ಕಳನ್ನೆತ್ತಿ ಕೊಂಡಿರುವುದು, ಇಷ್ಟಾದರೆ ಸಕಲ ವಿದ್ಯೆಗಳೂ ಬಂದಂತೆಯೆ. ಪಾರ್ವತೀ ಬಾಯಿಯು ಈ ಕೆಲಸಗಳನ್ನೆಲ್ಲ ಚೆನ್ನಾಗಿ ಕಲಿತಿದ್ದಳು. ಶರೀರ ದಾರ್ಢ್ಯ ವುಳ್ಳವಳಾಗಿದ್ದುದರಿಂದ ನೋಡಿದವರಿಗೆ ಹನ್ನೊಂದಕ್ಕಿಂತ ಹೆಚ್ಚು ವಯಸ್ಸಾದಂತೆ ಕಾಣುತ್ತಿದ್ದಳು. ಇದೇನು ಇವಳು ಇಷ್ಟು ದೊಡ್ಡ ದಾಗಿ ಬೆಳೆದಿದ್ದಾಳೆ, ಇನ್ನೂ ಮದುವೆಯಿಲ್ಲವೇ! ಎಂದು ನೆರೆಹೊರೆ ಯವರು ಆಡಿಕೊಳ್ಳುತ್ತಿದ್ದರು. ನೆರೆಹೊರೆಯವರ ಈ ಮಾತುಗಳಿಗೆ ಪಾರ್ವತಿಯ ತಾಯಿಯು ಬಹಳ ನೊಂದುಕೊಳ್ಳುತ್ತಿದ್ದಳಂತೆ.

ಜೋಷಿಯವರ ಮನೆಯ ಹತ್ತಿರ ಶ್ರೀ ಭಿಕಾಜಿ ಪಟವರ್ಧನ ರೆಂಬೊಬ್ಬ ರೆವಿನ್ಯೂ ಹುದ್ದೇದಾರರಿದ್ದರು. ಅವರ ಮನೆಗೆ ಜೋಷಿ ಯವರ ಪತ್ನಿಯು ಆಗಾಗ್ಗೆ ಹೋಗುವುದುಂಟು. ಹೀಗಿರುವಲ್ಲಿ ಭಿಕಾಜಿ ಯವರ ಪತ್ನಿಯು ಒಂದು ದಿನ ಆಕೆಯನ್ನು ಕುರಿತು, "ನಿಮ್ಮ ಪಾರ್ವ ತಿಗೆ ಮದುವೆ ಮಾಡುವುದಿಲ್ಲವೇ?" ಎಂದರು. ಅದಕ್ಕೆ ಪಾರ್ವತಿಯ ತಾಯಿಯು "ಏನು ಮಾಡೋಣ, ವರನನ್ನು ಹುಡುಕಿಕೊಂಡುಹೋಗು ವುದಕ್ಕೆ ನಮ್ಮ ಯಜಮಾನರಿಗೆ ವ್ಯವಸ್ಥೆವಿಲ್ಲ, ಎಷ್ಟೋ ತಾಪ ತ್ರಯಗಳು" ಎಂದಳು. ಭಿಕಾಜಿಯವರ ಪತ್ನಿ, "ಹಾಗಾದರೆ ನಮ್ಮವನೇ

ಒಬ್ಬ ಹುಡುಗನಿದ್ದಾನೆ; ಅವನಿಗೆ ಗೋವಾದಲ್ಲಿ ಕೆಲಸವಿದೆ, ಹದಿನೈದು ರೂಪಾಯಿ ಸಂಬಳ; ಅಂದರೆ ತಂದೆತಾಯಿಗಳಾಗಲಿ ಬೇರೆ ದಿಕ್ಕಾಗಲಿ ಯಾರೂ ಇಲ್ಲ; ಅವನಿಗೆ ನಿಮ್ಮ ಮಗಳನ್ನು ಕೊಡುವುದಾದರೆ ನೋಡಿ, ಎರಡು ಖರ್ಚನ್ನೂ ನಾವೇ ವಹಿಸಿಕೊಂಡು ಮದುವೆ ಮಾಡಿ ಕೊಳ್ಳುತ್ತೇವೆ; ಆದರೆ ಹುಡುಗನಿಗೆ ಕಾಲು ಸ್ವಲ್ಪ ಊನ" ಎಂದಳು. ಪಾರ್ವತಿಯ ತಾಯಿಯು ಮನೆಗೆ ಬಂದು ದೇವತಾರ್ಚನೆ ಮಾಡುತ್ತಿದ್ದ ತನ್ನ ಗಂಡನಿಗೆ ಈ ವಿಷಯವನ್ನು ತಿಳುಹಿಸಿದಳು. ಆತನು ಅದನ್ನು ಕೇಳಿ ಶ್ರೀ ರಾಮನೇ ಅವರ ಬಾಯಲ್ಲಿ ಹೀಗೆ ನುಡಿಸಿರಬೇಕು, ಈ ಸುಸಮಯವನ್ನು ಕಳೆದುಕೊಳ್ಳಬಾರದು, ಎಂದು ಭಿಕಾಜಿಯವರ ಮನೆಗೆ ಹೋಗಿ ವರನ ಕುಲಗೋತ್ರಗಳನ್ನು ವಿಚಾರಿಸಿದರು. ಜಾತಕವು ಕೂಡಿ ಬಂದುದರಿಂದ ಪಾರ್ವತೀಬಾಯಿಗೆ ಶುಭಲಗ್ನದಲ್ಲಿ ಮದುವೆಮಾಡಿಯೇ ಬಿಟ್ಟರು.

ಸಾಮಾನ್ಯವಾಗಿ ಮದುವೆ ಎಂದರೆ ಹೆಣ್ಣು ಮಕ್ಕಳಿಗೆ ಏನೋ ಒಂದು ಬಗೆಯ ಸಂತೋಷ. ಆದರೆ ಪಾರ್ವತೀಬಾಯಿಗೆ ಹಾಗಾಗಲಿಲ್ಲ. ಹುಡುಗನಿಗೆ ಕಾಲು ಊನ, ದಿಕ್ಕಿಲ್ಲ ಎಂಬುದೇ ಇದಕ್ಕೆ ಕಾರಣವಿರಬಹುದೇನೊ. ಆದರೆ ಈ ಮದುವೆಯ ವಿಷಯದಲ್ಲಿ ಆಕೆಯ ಅಭಿಪ್ರಾಯವನ್ನು ತೆಗೆದುಕೊಳ್ಳುವ ಯೋಚನೆಯೇ ಆಕೆಯ ಹಿರಿಯರಿಗೆ ಬರಲಿಲ್ಲ.

ಇನ್ನೂ ಮದುವೆಯಾಗಿಲ್ಲವೆಂದು ಅಪಹಾಸ್ಯ ಮಾಡುತ್ತಿದ್ದ ಜನರು ಈಗ "ಇದೇನನ್ಯಾಯ, ಯಾರೂ ದಿಕ್ಕಿಲ್ಲದ ಪರದೇಶಿ ಹುಡುಗ, ಕುಂಟು ಬೇರೆ, ಆಸ್ತಿಪಾಸ್ತಿಗಳಂತೂ ನಾಸ್ತಿ, ಇಂಥವನಿಗೆ ಹೆಣ್ಣು ಕೊಡುವುದಕ್ಕೆ ಇವರಿಗೇನು ಬಂತು ಕೇಡು!" ಎಂದು ಆಡಿಕೊಳ್ಳುವುದಕ್ಕೆ ಪ್ರಾರಂಭ ಮಾಡಿದರು. ಪಾರ್ವತಿಗೆ ಮದುವೆಮಾಡಿದರೆ ಗೆದ್ದೆವು ಎಂದುಕೊಂಡಿದ್ದ ಆ ತಂದೆತಾಯಿಗಳಿಗೆ ಜನರ ಈ ವಾಕ್ಯಗಳಿಂದ ವ್ಯಥೆಯು ಮತ್ತಷ್ಟು ಹೆಚ್ಚಾಯಿತೇ ಹೊರತು ಹಗುರವಾಗಲಿಲ್ಲ.

# ೩. ಸಂಸಾರ

ಮದುವೆಯಾದಂದಿನಿಂದ ಶ್ರೀ ಭಿಕಾಜಿಯವರ ಮನೆಯೇ ಪಾರ್ವತೀಬಾಯಿಗೆ ಅತ್ತೆಯ ಮನೆಯಂತಾಯಿತು. ಪದೇ ಪದೇ ಅವರ ಮನೆಗೆ ಹೋಗಿಬರುತ್ತಿದ್ದಳು. ಹದಿನಾಲ್ಕು ವರ್ಷ ತುಂಬಿದ ಮೇಲೆ ಪಾರ್ವತೀಬಾಯಿಯೂ ಪತಿಯೂ ವಾಸವಾಗಿದ್ದ ವೆರೆಗಾವ್ ಎಂಬೂರಿಗೆ ಹೋಗಿ ಸಂಸಾರ ಹೂಡಿದಳು. ಆ ಊರಿನಲ್ಲಿಯೇ ಇವರ ಪತಿಯ ಸ್ನೇಹಿತರಾದ ಬಾಲಾಜಿಭಾಸ್ಕರಜೋಷಿ ಎಂಬುವರೂ ಸಕುಟುಂಬರಾಗಿ ವಾಸಿಸುತ್ತಿದ್ದರು. ಈ ಎರಡು ಕುಟುಂಬದವರೂ ಸೇರಿ ಒಟ್ಟಿಗೆ ಒಂದು ಮನೆಮಾಡಿ ಅನ್ಯೋನ್ಯವಾಗಿರುತ್ತಿದ್ದರು. ಇವರ ಜತೆ ಇದ್ದುದರಿಂದ ಪಾರ್ವತೀಬಾಯಿ ಚಿಕ್ಕವಳಾದರೂ ಭಯವಿಲ್ಲದೆ ಸುಖವಾಗಿ ಸಂಸಾರ ಮಾಡಿಕೊಂಡಿದ್ದಳು. ಪಾರ್ವತೀಬಾಯಿಗೆ ಇಪ್ಪತ್ತು ವರ್ಷದ ವೇಳೆಗೆ ಮೂರು ಮಕ್ಕಳಾದವು. ಅವರಲ್ಲಿ ಒಬ್ಬನು ಮಾತ್ರ ಬದುಕಿದ್ದಾನೆ. ಆತನು ಈಗ ಪ್ರೊ|| ಕರ್ವೆಯವರ ಮಹಿಳಾ ವಿದ್ಯಾಪೀಠದಲ್ಲಿ ರಿಜಿಸ್ಟ್ರಾರ್ ಹುದ್ದೆಯಲ್ಲಿದ್ದಾನೆ.

ಪಾರ್ವತೀಬಾಯಿಯ ಪತಿಗೆ ಭೈಂದರದ ಹತ್ತಿರದ ರೈ ಎಂಬ ಹಳ್ಳಿಗೆ ವರ್ಗವಾಯಿತು. ಈ ವರ್ಗದಿಂದ ಇದುವರೆಗೂ ಒಟ್ಟಿಗಿದ್ದ ಸಂಸಾರಗಳೆರಡೂ ಬೇರೆಯಾದುವು. ಮೊದಲಿನಿಂದಲೂ ಬಯಲುಸೀಮೆ ಯಲ್ಲಿಯೇ ಇದ್ದ ಪಾರ್ವತೀಬಾಯಿಯ ಪತಿಗೆ ಆ ಹಳ್ಳಿಯ ಹವ ಒಂಟಲಿಲ್ಲ. ಆತನು ಮಲೇರಿಯಾ ಜ್ವರಕ್ಕೆ ತುತ್ತಾಗಿ ಕೆಲವು ದಿವಸ ಗಳಲ್ಲಿಯೇ ದೈವಾಧೀನನಾದನು. ಪಾಪ! ಪಾರ್ವತೀಬಾಯಿಯ ಸ್ಥಿತಿ ಬಹಳ ಶೋಚನೀಯವಾಯಿತು.

ಗಂಡನ ಗುಣವನ್ನು ಈಕೆ ಹೊಗಳಿದ್ದಾಳೆ. ಆತನು ಒಳ್ಳೆಯವ ನಾಗಿದ್ದನು. ದಯಾಪರನು. ಎಲ್ಲರಲ್ಲಿಯೂ ದಯೆಯಿಂದಿರುವುದೇ ಭಗವಂತನ ಸೇವೆಯೆಂದು ನಂಬಿದ್ದನು. ಆತನು ತನ್ನ ಕರ್ತವ್ಯವನ್ನು ಚೆನ್ನಾಗಿ ನಿರ್ವಹಿಸಿ ಮೇಲಣ ಅಧಿಕಾರಿಗಳ ಮೆಚ್ಚಿಗೆಗೆ ಪಾತ್ರನಾಗಿದ್ದನೇ ಹೊರತು ಅವರನ್ನು ಮೆಚ್ಚಿಸುವುದಕ್ಕಾಗಿ ಕೆಲಸ ಮಾಡಿದವನಲ್ಲ.

ಆತನಿಗೆ ತಂದೆ ತಾಯಿಗಳಾಗಲಿ ಹತ್ತಿರದ ನೆಂಟರಾಗಲಿ ಯಾರೂ ಇರಲಿಲ್ಲ. ಆಸ್ತಿಪಾಸ್ತಿಗಳಂತೂ ಇಲ್ಲವೇ ಇಲ್ಲ. ಇನ್ನು ಪಾರ್ವತೀ ಬಾಯಿಯ ಗತಿಯೇನು? ದಿಕ್ಕುತೋರದೆ ಆಕೆಯು ತೌರುಮನೆಯನ್ನು ಸೇರಿದಳು. ಇನ್ನು ಅಲ್ಲಿನ ಸ್ಥಿತಿ? ಈಗಾಗಲೇ ಪಾರ್ವತೀಬಾಯಿಯ ಅಕ್ಕಂದಿರಿಬ್ಬರೂ ವೈಧವ್ಯಕ್ಕೆ ತುತ್ತಾಗಿ ತಂದೆಯ ಮನೆಯನ್ನು ಸೇರಿದ್ದರು. ಈಗ ಮೂರನೆಯವಳಿಗೂ ಅದೇ ಗತಿ ಎಂದರೆ ಆ ಹೆತ್ತವರ ಹೊಟ್ಟೆಯ ಸಂಕಟವೆಷ್ಟುಮಟ್ಟಿನದಿರಬಹುದು? ಬಹಳ ಚಿಕ್ಕಂದಿನಿಂದಲೂ ತಮ್ಮ ತಾಯಿಯ ತವಕವನ್ನೂ ಶ್ರಮವನ್ನೂ ಹಗುರ ಮಾಡಬೇಕೆಂದು ಯೋಚಿಸುತ್ತಿದ್ದ ಪಾರ್ವತೀಬಾಯಿಗೆ ಈಗ ತನ್ನ ತಂದೆ ತಾಯಿಗಳ ಗೋಳನ್ನು ನೋಡುವುದು ಬಹಳ ಕಷ್ಟವಾಯಿತು. ಅವರನ್ನು ಸಂತೋಷಗೊಳಿಸಲೋಸುಗವಾದರೂ ತಾನು ತನ್ನ ವ್ಯಸನವನ್ನು ನುಂಗಿಕೊಂಡು ಅವರೆದುರಿಗೆ ಸಂತೋಷವನ್ನು ನಟಿಸಬೇಕಾಯಿತು.

ಪೂರ್ವಾಚಾರದಂತೆ ಪಾರ್ವತೀಬಾಯಿಗೆ ತಲೆಯ ಕೂದಲನ್ನು ತೆಗೆಯಿಸಿ ವಿರೂಪ ಮಾಡಿದ್ದೂ ಆಯಿತು. ಆಕೆಯ ಮೂರೂವರೆ ವರ್ಷದ ಮಗುವಾದ 'ನಾನ'ನು ತಾಯಿಯ ಈ ವಿರೂಪವನ್ನು ಕಂಡು "ಅಮ್ಮಾ, ಇದೇಕಮ್ಮಾ ಹೀಗಿದ್ದೀಯ, ನಿನ್ನ ಕೂದಲೆಲ್ಲಾ ಎಲ್ಲಿ ಹೋಯಿತು, ಈ ಅಸಹ್ಯವಾದ ಕೆಂಪು ಸೀರೆಯನ್ನೇಕೆ ಉಟ್ಟಿರುವೆ?" ಎಂದು ಸುಮ್ಮನೆ ಕೇಳುವನು. ಈ ಅರಿಯದ ಮಗುವಿಗೆ ಪಾರ್ವತೀಬಾಯಿಯು ಒಂದೊಂದು ಸಲ "ಎಲ್ಲವನ್ನೂ ನಿಮ್ಮ ತಂದೆ ತೆಗೆದುಕೊಂಡು ಹೋದರು" ಎಂದು ಹೇಳುತ್ತಿದ್ದಳು. "ಹಾಗಾದರೆ ನಾವೂ ತಂದೆಯ ಬಳಿಗೆ ಹೋಗೋಣ, ಬಾ" ಎಂದು ಮಗುವು ಎನ್ನುತ್ತಿದ್ದನಂತೆ. ಹೇಗೊ ತಂದೆಯ ಮನೆಯಲ್ಲಿ ಐದು ವರ್ಷಗಳನ್ನು ಕಳೆದುದಾಯಿತು.

ಈ ಮಧ್ಯೆ ಪಾರ್ವತೀಬಾಯಿಯ ಅಕ್ಕನಾದ ಆನಂದಿಬಾಯಿ ಅಥವಾ 'ಬಾಯ' ಎಂಬುವರನ್ನು ಪ್ರೊ|| ಕರ್ವೆಯವರು ವಿವಾಹವಾದರು. ಈ ವಿವಾಹವು ಪಾರ್ವತೀಬಾಯಿಯ ಜೀವನದಲ್ಲಿ ಒಂದು ಮಹತ್ತರವಾದ ಬದಲಾವಣೆಗೆ ಕಾರಣವಾಯಿತೆನ್ನಬಹುದು,

ಪಾರ್ವತೀಬಾಯಿಯ ಅಕ್ಕನಾದ ಬಾಯ ಕೇವಲ ಒಂಬತ್ತನೆಯ ವಯಸ್ಸಿನಲ್ಲಿಯೇ ವೈಧವ್ಯಕ್ಕೆ ಗುರಿಯಾಗಿ ತಂದೆಯ ಮನೆಯಲ್ಲಿದ್ದಳು. ಪಂಡಿತ ರಮಾಬಾಯಿಯವರು ಅಮೇರಿಕೆಯಿಂದ ಹಿಂದಿರುಗಿದ ಮೇಲೆ ಮುಂಬಯಿಯಲ್ಲಿ 'ಶಾರದಾ ಸದನ'ವನ್ನು ಸ್ಥಾಪಿಸಿದರಷ್ಟೆ. ಬಾಯಳ ಅಣ್ಣನಾದ ನರಹರ ಪಂತರು ಬಾಯಳನ್ನು ಓದಿಸ ಬೇಕೆಂಬ ಅಭಿಲಾಷೆಯಿಂದ ಬೊಂಬಾಯಿಗೆ ಕರೆತಂದು ಶಾರದಾ ಸದನದಲ್ಲಿ ಸೇರಿಸಿದರು. ಆಗ ಆಕೆಗೆ ೨೨ ವರ್ಷ ವಯಸ್ಸು. ಪಂಡಿತ ರಮಾಬಾಯಿಯವರಿಗೆ ತಮ್ಮ ಸದನದ ಪ್ರಥಮ ಶಿಷ್ಯೆಯಾದ ಬಾಯಳಲ್ಲಿ ಬಹಳ ವಿಶ್ವಾಸ. ಬಾಯಳಿಗೂ ರಮಾಬಾಯಿಯವರಲ್ಲಿ ವಿಶೇಷವಾದ ಭಕ್ತಿ.

# ೪. ಅಕ್ಕನ ಪುನರ್ವಿವಾಹ

ಪ್ರೊ|| ಕರ್ವೆಯವರೂ ಪಾರ್ವತೀಬಾಯಿಯ ಅಣ್ಣನವರಾದ ನರಹರಪಂತರೂ ಸಹಾಧ್ಯಾಯಿಗಳು. ಅವರಿಬ್ಬರೂ ತಮ್ಮ ವಿಶ್ವವಿದ್ಯಾನಿಲಯದ ವ್ಯಾಸಂಗವನ್ನು ಮುಗಿಸಿಕೊಂಡು ಬೊಂಬಾಯಿಯಲ್ಲಿಯೇ ನೆಲೆಸಿದ್ದರು. ಮೊದಲಿನಿಂದ ಇಬ್ಬರೂ ಒಂದೇ ಮನೆಯಲ್ಲಿ ಅಣ್ಣ ತಮ್ಮಂದಿರಂತೆ ವಾಸಿಸುತ್ತಿದ್ದರು. ಕ್ರಮೇಣ ಇನ್ನೂ ಕೆಲವು ಸ್ನೇಹಿತರು ಇವರ ಜೊತೆಗೆ ಸೇರಿದರು. ಹೀಗೆ ಏಳೆಂಟು ಸಂಸಾರಗಳು ಒಟ್ಟುಗೂಡಿ ಒಂದು ದೊಡ್ಡ ಅವಿಭಕ್ತ ಕುಟುಂಬದಂತೆ ಇರುತ್ತಿದ್ದುವು. ಈ ಕುಟುಂಬದಲ್ಲಿ ಪ್ರೊ|| ಕರ್ವೆಯವರ ಐದಾರು ಶಿಷ್ಯರೂ ಕೂಡ ಇದ್ದರು. ಆಗಾಗ್ಗೆ ಪ್ರೊ|| ಕರ್ವೆಯವರು ನರಹರಪಂತರ ಸಂಗಡ ಅವರ ಗ್ರಾಮವಾದ ದೇವರುಕ್ಕಿಗೆ ಹೋಗುವುದುಂಟು. ಹಾಗೆಯೇ ತಮ್ಮ ಗ್ರಾಮವಾದ ಮುರುದಕ್ಕೆ ನರಹರಪಂತರನ್ನು ಕರೆದುಕೊಂಡು ಹೋಗುವುದೂ ಉಂಟು. ಈ ಸ್ನೇಹಿತರಿಬ್ಬರ ಪತ್ನಿಯರೂ ಕೆಲವು ಕಾಲದ ನಂತರ ತೀರಿ ಹೋದರು.

ಪ್ರೊ|| ಕರ್ವೆಯವರು ಒಂದು ಸಲ ದೇವರುಕ್ಕಿಗೆ ಹೋಗಿದ್ದಾಗ ಪಾರ್ವತೀಬಾಯಿಯ ತಂದೆ ಜೋಷಿಯವರಿಗೂ ಅವರಿಗೂ ಈ ರೀತಿ ಸಂಭಾಷಣೆ ನಡೆಯಿತು.

ಜೋಷಿ:—ಯೌವನಸ್ಥರೂ ಅನುಕೂಲಸ್ಥರೂ ಗುಣಾಢ್ಯರೂ ಆದ ತಾವು ಹೀಗೆ ಅಪತ್ನೀಕರಾಗಿ ಇರುವುದು ಚೆನ್ನಾಗಿಲ್ಲ. ನೀವೇಕೆ ಪುನಃ ಮದುವೆಯಾಗಬಾರದು ?

ಪ್ರೊ|| ಕರ್ವೆ:—ನನ್ನ ನಿರಾಡಂಬರವಾದ ಜೀವನದಲ್ಲಿ ಸಂತೋಷದಿಂದ ಭಾಗವಹಿಸಿ, ನನ್ನೊಂದಿಗೆ ಸಂಸಾರಮಾಡಿಕೊಂಡಿರಲು ಇಷ್ಟಪಡುವಂಥ ಬ್ರಾಹ್ಮಣ ಬಾಲವಿತಂತುವು ಸಿಕ್ಕಿದರೆ ಮದುವೆಯಾಗುವುದು ; ಇಲ್ಲದಿದ್ದರೆ ಯಾವಜ್ಜೀವವೂ ಹೀಗೆಯೇ ಕಾಲಕಳೆಯುವುದು, ಎಂದು ಕೊಂಡಿದ್ದೇನೆ.

ಜೋಷಿ:—ಸರಿ ! ಹಾಗಾದರೆ ನಮ್ಮ ಬಾಯಳನ್ನೇಕೆ ಮದುವೆಯಾಗಬಾರದು ?

ಪ್ರೊ|| ಕರ್ವೆ:—ನಿಮ್ಮ ಮಗಳು ಒಪ್ಪುವುದಾದರೆ ನನ್ನ ಅಭ್ಯಂತರ ವೇನೂ ಇಲ್ಲ.

ಜೋಷಿಯವರು ಕೂಡಲೇ ಬೊಂಬಾಯಿಗೆ ಹೋಗಿ ಶಾರದಾ ಸದನದಲ್ಲಿದ್ದ ಬಾಯಳನ್ನು ಕಂಡು "ಯೋಗ್ಯರಾದ ಪ್ರೊ|| ಕರ್ವೆಯವರು ನಿನ್ನನ್ನು ಮದುವೆಯಾಗಲು ಒಪ್ಪಿರುವರು ; ನೀನು ಸಮ್ಮತಿಸುವುದಾದರೆ ಈ ವಿವಾಹಕ್ಕೆ ನನ್ನ ಅಭ್ಯಂತರವೇನೂ ಇಲ್ಲ" ಎಂದರಂತೆ. ಬಾಯಳು ಒಪ್ಪಿದಳು.

ಈಗ್ಗೆ ನಾಲ್ವತ್ತು ವರ್ಷಗಳ ಹಿಂದೆಯೇ ಜೋಷಿಯವರು ತಮ್ಮ ಮಗಳಿಗೆ ಪುನರ್ವಿವಾಹ ಮಾಡುವಷ್ಟು ಧೈರ್ಯವನ್ನು ತಾಳಿದುದಕ್ಕೆ ಒಂದು ಮುಖ್ಯ ಕಾರಣವಿತ್ತು. ಬಾಯಳು ಕೇವಲ ಒಂಬತ್ತನೆಯ ವಯಸ್ಸಿಗೇ ವೈಧವ್ಯಕ್ಕೆ ಗುರಿಯಾದುದರಿಂದ ಜೋಷಿಯವರಿಗೆ ಪ್ರಪಂಚವೇ ಬೇಡವಾಗಿ ಮನಸ್ಸು ಬಹಳ ಕಲಕಿ ಹೋಯಿತು. ಆಗ ಅವರು ಕಾಶೀ ಯಾತ್ರೆಗೆಂದು ಹೊರಟರು. ಮಧ್ಯೆ ಪುಣೆಯಲ್ಲಿ ಕೆಲವು ದಿವಸ ತಂಗಬೇಕಾಯಿತು. ಆ ಸಮಯದಲ್ಲಿ ಆ ಊರಿನ ಕೆಲವರು ಸೇರಿ ವಿತಂತು ವಿವಾಹ ಸಮಸ್ಯೆಯನ್ನು ಚರ್ಚಿಸಲು ಒಂದು ಮಹಾ ಸಭೆಯನ್ನು ಕೂಡಿಸಿದ್ದರು. ಜೋಷಿಯವರು ಕುತೂಹಲದಿಂದ ಆ ಸಭೆಗೆ ಹೋಗಿದ್ದರು. ಅಲ್ಲಿ ದೊಡ್ಡ ಪಂಡಿತರು ಸೇರಿ ನಡೆಸಿದ ಚರ್ಚೆಯನ್ನು ಕೇಳಿ ಜೋಷಿಯವರಿಗೆ ಬಾಲವಿತಂತುಗಳ ಪುನರ್ವಿವಾಹವು ದೋಷವಲ್ಲವೆಂದು ಸ್ಪಷ್ಟವಾಯಿತಂತೆ. ಈ ಕಾರಣದಿಂದಲೇ ಅವರು ಬಾಯಳ ಮದುವೆಗೆ ಒಪ್ಪಿದುದು.

ಮದುವೆಯು ಪುಣೆಯಲ್ಲಿ ಜರುಗಿತು. ಅಲ್ಲಿನ ವೃತ್ತಪತ್ರಿಕೆಗಳೆಲ್ಲಾ ಈ ಸಮಾಚಾರವನ್ನು ಪ್ರಕಟಿಸುತ್ತ ವಧುವಿನ ತಂದೆ ಮತ್ತು ಅಣ್ಣನ ಸಮ್ಮತಿಯಿಂದ ಇದು ಜರುಗಿತೆಂದು ಪ್ರಸಿದ್ಧಗೊಳಿಸಿದುವು. ಈ ಸುದ್ದಿಯು ಜೋಷಿಯವರ ಗ್ರಾಮವಾದ ದೇವರುಕ್ಕಿಗೆ ಮುಟ್ಟಿತೋ

ಇಲ್ಲವೋ ಊರಿನವರೆಲ್ಲರೂ ಇವರ ಮನೆಯವರ ಮೇಲೆ ಬಹಿಷ್ಕಾರ ಬಾಣವನ್ನು ಪ್ರಯೋಗಿಸಿಬಿಟ್ಟರು.

ಅಗಸರು, ನಾಯಿಂದರು ಸಹ ಬಹಿಷ್ಕರಿಸಿ ಬಿಟ್ಟರಂತೆ. ಅಷ್ಟಾದರೂ ಜೋಷಿಯವರು ಸ್ವಲ್ಪವಾದರೂ ಭಯಪಡಲಿಲ್ಲ. "ನನ್ನ ಗಂಡು ಮಕ್ಕಳು ಹೆಣ್ಣು ಮಕ್ಕಳೆಲ್ಲರೂ ದಾಂಪತ್ಯಜೀವನದ ಕಷ್ಟಸುಖಗಳನ್ನನುಭವಿಸಿದ್ದಾರೆ; ಪಾಪ, ಬಾಯ ಮಾತ್ರ ಅದರಿಂದ ಏಕೆ ವಂಚಿತಳಾಗಿರ ಬೇಕು? ಅವಳು ಮಾಡಿದ ಪಾಪವೇನು? ಅದರಿಂದಲೇ ಅವಳಿಗೆ ಮದುವೆ ಮಾಡಿದುದು; ಇದರಲ್ಲಿ ಯಾವ ತಪ್ಪೂ ಇಲ್ಲ," ಎಂದು ಸಮಾಧಾನ ಹೇಳುತ್ತಿದ್ದರಂತೆ. ಒಂದು ವರ್ಷದ ನಂತರ ಊರಿನ ಮೂರು ದೇವಸ್ಥಾನಗಳ ಕಾಮಗಾರಿಕೆಗಾಗಿ ಜೋಷಿಯವರು ಒಂದು ನೂರು ರೂಪಾಯಿಗಳನ್ನು ಕೊಟ್ಟು ಊರಿನವರಿಗೆ ಕೈಮುಗಿದ ಮೇಲೆ ಬಹಿಷ್ಕಾರವು ಕೊನೆಗೊಂಡಿತು.

## ೫. ವಿದ್ಯಾರ್ಜನೆಯ ಪ್ರಥಮ ಪ್ರಯತ್ನ

ಬಾಯಳು ಮದುವೆಯಾಗಿ ಪುಣೆಯಲ್ಲಿ ಸಂಸಾರ ಮಾಡಿಕೊಂಡಿದ್ದಳು. ಆಕೆಗೆ ಒಂದು ಗಂಡು ಮಗು. ಜೋಷಿಯವರು ಪತ್ನಿಯನ್ನೂ ಮಗಳಾದ ಪಾರ್ವತೀಬಾಯಿಯನ್ನೂ ಕರೆದುಕೊಂಡು ಮತ್ತೆ ಕಾಶಿಗೆ ಹೊರಟರು. ಪುಣೆಯಲ್ಲಿ ಕರ್ವೆ ದಂಪತಿಗಳನ್ನು ನೋಡಲು ತಂಗಿದರು. ಆಗ ಅವರ ಮುದ್ದು ಮಗ ಶಂಕರನನ್ನು ಕಂಡು, ಜೋಷಿಯವರು ಆನಂದಬಾಷ್ಪಗಳನ್ನು ಸುರಿಸುತ್ತ, "ಶ್ರೀ ರಾಮನ ಲೀಲೆ ಎಂತಹುದು! ಅವನ ಕೃಪೆಯಿಂದಲ್ಲವೇ ನಮ್ಮ ಬಾಯಳಿಗೆ ಇಂತಹ ಪುತ್ರರತ್ನ ಲಭಿಸಿದುದು! ನಮ್ಮ ಜನರು ಬಾಲವಿತಂತುಗಳ ಮದುವೆಗೂ ಅಡ್ಡಿಮಾಡಿ ದೇಶೋದ್ಧಾರಕ್ಕಾಗಿ ಹುಟ್ಟುವ ಒಳ್ಳೆಯ ಪ್ರಜಾಸಂಖ್ಯೆಯನ್ನೇ ತಡೆದು ಬಿಡುವುದು ಅನ್ಯಾಯವಲ್ಲವೇ?" ಎಂದು ನುಡಿದರು.

ಪಾರ್ವತೀಬಾಯಿಯು ತನ್ನ ಆರು ವರ್ಷದ ಮಗನನ್ನು ಕರೆದುಕೊಂಡು ಕಾಶಿಗೆ ಹೋಗುವುದು ಅವರ ಅಕ್ಕ ಬಾಯಳಿಗೆ ಇಷ್ಟವಾಗಲಿಲ್ಲ. ಆಕೆಯು ತಂಗಿಯನ್ನು ಕುರಿತು "ಪುಣೆಯಲ್ಲಿಯೇ ಇದ್ದು ಕರ್ವೆಯವರ ಬಳಿ ವಿದ್ಯಾಭ್ಯಾಸವನ್ನು ಮಾಡು; ಕಾಶಿಯಲ್ಲಿ ಕಾಲರಾ ಉಪದ್ರವವು ಹೆಚ್ಚಾಗಿರುವುದರಿಂದ ಅನೇಕ ಯಾತ್ರಾರ್ಥಿಗಳು ಅದಕ್ಕೆ ಆಹುತಿಯಾಗುವರು. ಈ ಸಣ್ಣ ಹುಡುಗನನ್ನು ಕರೆದುಕೊಂಡು ನೀನು ಅಲ್ಲಿಗೆ ಹೋಗಬೇಡ" ಎಂದು ಹೇಳಿದಳು.

ಪಾರ್ವತೀಬಾಯಿಯ ತಾಯಿಯವರು ಸಂಪ್ರದಾಯ ಶರಣರು. ಅವರು ಬಾಯಳ ಮದುವೆಗೆ ಸಮ್ಮತಿಸಿದವರಲ್ಲ. ಈಗ ಪಾರ್ವತೀಬಾಯಿಯನ್ನು ಇಲ್ಲಿ ಬಿಡುವುದೆಂದರೆ 'ಅಕ್ಕನ ಹಾದಿಯನ್ನು ತಂಗಿಯೂ ಅನುಸರಿಸಿದರೆ' ಎಂಬ ಭೀತಿಯು ಬಹಳವಾಗಿ ಪೀಡಿಸುತ್ತಿತ್ತು. "ಪಾರ್ವತಿಯು ಇಲ್ಲಿದ್ದು ನಿನ್ನ ಹಾದಿಯನ್ನು ಹಿಡಿದರೆ ನಮ್ಮ ವಂಶಕ್ಕೇ ದೊಡ್ಡ ಕಳಂಕ. ಅದರ ಬದಲು ಅವಳು ಕಾಶಿಗೆ ಹೋಗಿ ಕಾಲರಾದಿಂದ ಸಾಯುವುದಾದರೂ ಲೇಸು" ಎಂದು ಬಾಯಳಿಗೆ ಹೇಳಿದರಂತೆ. "ನೀನು ಇಲ್ಲಿ

ನಿಂತರೆ ನಾನು ಪ್ರಾಣ ಕಳೆದುಕೊಳ್ಳುವೆನು" ಎಂದು ಪಾರ್ವತಿಗೆ ಹೇಳಿದರಂತೆ. ಕಡೆಗೆ ಪಾರ್ವತೀಬಾಯಿಯನ್ನು ದೇವರುಕ್ಕಿಗೆ ಕಳುಹಿಸಿಬಿಟ್ಟು ಮುದುಕರು ಕಾಶಿಗೆ ಪ್ರಯಾಣ ಮಾಡಿದರು.

ವೃದ್ಧ ದಂಪತಿಗಳು ಕಾಶಿಯಿಂದ ಹಿಂದಿರುಗುವ ಹೊತ್ತಿಗೆ ಪಾರ್ವತೀಬಾಯಿಯ ಮಗ ನಾನನಿಗೆ ಉಪನಯನ ಮಾಡುವ ವಯಸ್ಸಾಗಿದ್ದಿತು. ಮಿರಜ್‌ನಲ್ಲಿ ಕೆಲಸಕ್ಕಿದ್ದ ಪಾರ್ವತೀಬಾಯಿಯ ಮೈದುನನು ಬಂದು ಹುಡುಗನಿಗೆ ಬ್ರಹ್ಮೋಪದೇಶ ಮಾಡಿದನು. ಇನ್ನು ಹುಡುಗನ ಮುಂದಿನ ವಿದ್ಯಾಭ್ಯಾಸಕ್ಕೆ ದೇವರುಕ್ಕಿನಲ್ಲಿ ಅವಕಾಶವಿರಲಿಲ್ಲ. ಮಿರಜ್‌ನಲ್ಲಿ ಒಳ್ಳೆಯ ಅವಕಾಶವಿದೆಯೆಂದು ಮೈದುನನು ಹೇಳಿದುದರಿಂದ ಪಾರ್ವತೀಬಾಯಿಯು ಮಗನನ್ನು ಕರೆದುಕೊಂಡು ಮಿರಜ್‌ಗೆ ಹೋದಳು. ಮಿರಜ್‌ನಲ್ಲಿ ತಮ್ಮ ಮೈದುನನಿಗೆ ಬರುತ್ತಿದ್ದ ಎಂಟು ರೂಪಾಯಿಗಳಲ್ಲಿ ಸಾಧ್ಯವಾದಷ್ಟು ಅಟ್ಟಹಾಸದಿಂದ ಜೀವನ ಮಾಡತೊಡಗಿದರು. ಹುಡುಗನು ಶಾಲೆಗೆ ಸೇರಿ ಕ್ರಮವಾಗಿ ಓದುತ್ತಿದ್ದನು.

ಪಾರ್ವತೀಬಾಯಿ ಮಿರಜ್‌ಗೆ ಹೋದ ಎರಡು ತಿಂಗಳ ನಂತರ ಕರ್ವೆ ದಂಪತಿಗಳು ಯಾವುದೋ ಕೆಲಸಕ್ಕಾಗಿ ಅಲ್ಲಿಗೆ ಹೋದರು. ಅಲ್ಲಿ ಪಾರ್ವತೀಬಾಯಿಯನ್ನು ಕಂಡು ಅವರ ಅಕ್ಕನು, "ನೀನು ಪುಣೆಗೆ ಬಂದು ಬಿಡು, ಅಲ್ಲಿ ಹುಡುಗನ ವಿದ್ಯಾಭ್ಯಾಸಕ್ಕೆ ತುಂಬಾ ಅನುಕೂಲ" ಎಂದರು. ಹಿಂದೆ ತನ್ನ ತಾಯಿಯವರು ತನ್ನನ್ನು ಪುಣೆಯಲ್ಲಿ ಬಿಟ್ಟು ಹೋಗಲು ಇಷ್ಟಪಡದೆ ಇದ್ದುದನ್ನೆಲ್ಲ ನೆನೆದು ಹಿರಿಯರ ಆಲೋಚನೆಯಲ್ಲಿ ನಂಬಿಕೆಯನ್ನಿಟ್ಟಿದ್ದ ಪಾರ್ವತೀಬಾಯಿಯು ಸಮಾಜ ಸುಧಾರಕರೆನ್ನಿಸಿಕೊಂಡಿದ್ದ ಕರ್ವೆ ದಂಪತಿಗಳೊಂದಿಗೆ ಹೋಗಿ ಅವರ ಮನೆಯಲ್ಲಿರಲು ಇಷ್ಟಪಡಲಿಲ್ಲ. ಆದರೆ ಮಗನಿಗೆ ಸರಿಯಾದ ವಿದ್ಯಾಭ್ಯಾಸ ಮಾಡಿಸಬೇಕೆಂಬ ಹಂಬಲವು ಹೆಚ್ಚಲು ಹುಡುಗನನ್ನು ಮಾತ್ರ ಅಕ್ಕನೊಂದಿಗೆ ಪುಣೆಗೆ ಕಳುಹಿಸಿ ಕೊಟ್ಟು ತಾನು ಮಿರಜ್‌ನಲ್ಲೇ ಉಳಿದುಕೊಂಡಳು.

ಆರುತಿಂಗಳನಂತರ ಪಾರ್ವತೀಬಾಯಿಯು ಮಗನನ್ನು ನೋಡುವುದಕ್ಕಾಗಿ ಪುಣೆಗೆ ಹೋದಳು. ಈ ಸಮಯದಲ್ಲಿ ಪ್ರೊ|| ಕರ್ವೆಯವರು

ಹಿಂದೂ ವಿಧವೆಯರ ಪರಿಪರಿಯ ಕಷ್ಟಗಳ ನಿವಾರಣೆಗಾಗಿ ಒಂದು 'ವಿಧವಾ ಆಶ್ರಮವನ್ನು' ಸ್ಥಾಪಿಸಬೇಕೆಂದು ಆಲೋಚಿಸುತ್ತಿದ್ದರು. ಒಂದು ದಿವಸ ಅವರು ಪಾರ್ವತೀಬಾಯಿಯನ್ನು ಕುರಿತು "ನಾನು ವಿಧವೆಯರಿಗಾಗಿ ಒಂದು ಆಶ್ರಮವನ್ನು ಸ್ಥಾಪಿಸಬೇಕೆಂದಿದ್ದೇನೆ. ಅದಕ್ಕೆ ನೀವು ಯಾವ ಬಗೆಯ ಸಹಾಯಮಾಡುತ್ತೀರಿ?" ಎಂದು ಕೇಳಿದರು. ಆಗ ಪಾರ್ವತೀಬಾಯಿಗೆ ಆಶ್ರಮ ಎಂದರೇನು ಎನ್ನುವಷ್ಟು ತಿಳುವಳಿಕೆಯೂ ಇರಲಿಲ್ಲ. ತನಗೆ ಮತ್ತಾವ ಕೆಲಸಮಾಡುವ ಸಾಮರ್ಥ್ಯವೂ ಇಲ್ಲದುದರಿಂದ "ನಿಮ್ಮ ಆಶ್ರಮದಲ್ಲಿ ಅಡಿಗೆಮಾಡುತ್ತೇನೆ" ಎಂದು ಹೇಳಿದಳು. ಆಗ ಕರ್ವೆಯವರು ಸಂತೋಷದಿಂದ, "ಸರಿ, ಆಶ್ರಮದ ಕೆಲಸವು ಇಷ್ಟರಲ್ಲಿ ಎಲ್ಲಿ ಪ್ರಾರಂಭವಾಗುವುದು? ಅಷ್ಟರಲ್ಲಿ ನೀವು ಇಲ್ಲಿರುವ ಹೋಂ ಸ್ಕೂಲಿಗೆ ಹೋಗಿ ಉಪಾಧ್ಯಾಯಿನಿಯ ಯೋಗ್ಯತಾ ಪತ್ರವನ್ನು ಸಂಪಾದಿಸಿರಿ" ಎಂದರು.

"ಹೋಂ ಸ್ಕೂಲ್" ಎಂಬ ಇಂಗ್ಲೀಷ್ ಪದಗಳ ಅರ್ಥವನ್ನು ಬಾಯಳು ಮರಾಠಿಯಲ್ಲಿ ಪಾರ್ವತೀಬಾಯಿಗೆ ವಿವರಿಸಿ ಹೇಳಬೇಕಾಯಿತು. ಅಂತೂ, ಇಪ್ಪತ್ತಾರು ವರ್ಷದ ಪಾರ್ವತೀಬಾಯಿಯು ಮಹಿಳೆಯರಿಗಾಗಿ ಹತ್ತಿರದ ಮಾರುತಿಯ ದೇವಸ್ಥಾನದಲ್ಲಿ ಏರ್ಪಡಿಸಿದ್ದ "ಹೋಂ ಸ್ಕೂಲಿಗೆ" ಅ. ಆ. ಇ. ಈ ಕಲಿಯುವುದಕ್ಕೆ ಸೇರಿದಳು. ಹೋಂ ಸ್ಕೂಲಿಗೆ ಒಳ್ಳೆಯ ಧನಿಕರ ಮನೆಯ ಹೆಂಗುಸರು ಬರುತ್ತಿದ್ದರು. ಅಂಥವರ ಮಧ್ಯೆ ಈ ಕೊಂಕಣದ ಮಡಿ ಹೆಂಗುಸಿಗೆ ಉಪಾಧ್ಯಾಯಿನಿಯು ಲಕ್ಷ್ಯವಿಟ್ಟು ಪಾಠ ಹೇಳಲಿಲ್ಲ. ಈ ಅಲಕ್ಷ್ಯದಿಂದ ಮನನೊಂದು ಪಾರ್ವತೀಬಾಯಿಯು ಶಾಲೆಗೆ ಹೋಗುವುದನ್ನು ನಿಲ್ಲಿಸಿಬಿಟ್ಟಳು. "ನಾನು ಮನೆಯಲ್ಲಿದ್ದು ಎಲ್ಲ ಕೆಲಸಗಳನ್ನೂ ಮಾಡುತ್ತೇನೆ, ಹುಡುಗನನ್ನು ಓದಿಸಿರಿ, ಸಾಕು" ಎಂದು ಅಕ್ಕನಿಗೆ ಹೇಳಿದಳು. ಆದರೆ ಬಾಯಳು ಅದಕ್ಕೆ ಒಪ್ಪಲಿಲ್ಲ. ತಂಗಿಗೆ ಹೇಗಾದರೂ ವಿದ್ಯಾಭ್ಯಾಸ ಮಾಡಿಸಬೇಕೆಂಬುದಾಗಿ ಯೋಚಿಸಿ, ಬಾಯಳು "ಮನೆಗೆಲಸಗಳನ್ನು ನೀನೇನೂ ಮಾಡಬೇಕಾಗಿಲ್ಲ; ಸ್ಕೂಲಿಗೆ ಹೋಗದಿದ್ದರೆ ಸುಮ್ಮನೆ ಕುಳಿತಿರು" ಎಂದು ಹೇಳಿ ಕೆಲವು ದಿವಸ ತಂಗಿಯನ್ನು ಯಾವ ಕೆಲಸಕ್ಕೂ ಬಿಡದೆ ಸುಮ್ಮನೆ ಕೂರಿಸಿಬಿಟ್ಟಳಂತೆ.

ಚಿಕ್ಕಂದಿನಿಂದಲೂ ಮೈಬಗ್ಗಿ ಕೆಲಸಮಾಡಿ ಅಭ್ಯಾಸವಾದವರು, ಒಂದು ದಿವಸವಾದರೂ ಸುಮ್ಮನೆ ಕುಳಿತಿರಲು ಸಾಧ್ಯವೇ? ಪಾರ್ವತೀಬಾಯಿಗೆ ಹಾಗೆ ಕುಳಿತಿರಲು ಆಗಲಿಲ್ಲ. ಆ ವೇಳೆಗೆ ಪ್ರೊ|| ಅಗರ್‌ಕರ್ ಎಂಬುವರ ಪತ್ನಿಗೆ ಪಾಠ ಹೇಳಲು ಮನೆಯಲ್ಲಿ ಒಬ್ಬ ಉಪಾಧ್ಯಾಯಿನಿಯನ್ನು ಗೊತ್ತು ಮಾಡಿದ್ದಾರೆಂದು ತಿಳಿಯಿತು. ಪಾರ್ವತೀಬಾಯಿಯು ಅವರ ಮನೆಗೆ ಹೋಗಿ ಆಕೆಯ ಸಂಗಡ ಬಾಲಬೋಧೆ ಓದುವುದು, ಒಂದರಿಂದ ನೂರರವರೆಗೆ ಎಣಿಸುವುದು, ಮಗ್ಗಿ ಹೇಳುವುದು ಇವನ್ನು ಕಲಿತಳು. ಈಗಲೀಗ ಪಾರ್ವತೀಬಾಯಿಗೆ ವಿದ್ಯಾಭ್ಯಾಸದಲ್ಲಿ ಆಸೆಹುಟ್ಟಿತು. ಆದರೆ ಶಾಲೆಗೆ ಹೋದರೆ ಜನರು ನಗುವರು; ಮನೆಯಲ್ಲಿದ್ದರೆ ಅಕ್ಕನು ಸುಮ್ಮನೆ ಕುಳ್ಳಿರಿಸಿ ಶಿಕ್ಷಿಸುವಳು. ಅಲ್ಲದೆ ಮಗನಿಗೆ ಆಗಲೇ ಏಳು ವರ್ಷ. ವಿದ್ಯಾಭ್ಯಾಸದ ಹೊರೆಯನ್ನು ಹೆರರಿಗೆ ಹೊರಿಸುವುದು ತನಗೆ ತರವೆ? ಇಪ್ಪತ್ತಾರು ವರ್ಷದವಳು ವಿದ್ಯೆಕಲಿತು ಸಂಪಾದಿಸುವಂತಾಗುವುದು ಸಾಧ್ಯವೇ? ಇವೇ ಮುಂತಾದ ಅನೇಕ ಯೋಚನೆಗಳು ಪಾರ್ವತೀ ಬಾಯಿಯ ಮನಸ್ಸನ್ನು ಕಲಕತೊಡಗಿದುವು. ಕೊನೆಗೆ ಹೇಗಾದರೂ ಶಾಲೆಗೆ ಸೇರಿ ವ್ಯಾಸಂಗಮಾಡಿ ಉಪಾಧ್ಯಾಯವೃತ್ತಿಯನ್ನು ಮಾಡು ವುದೇ ಸರಿಯೆಂದು ಸಂಕಲ್ಪಿಸಿಕೊಂಡು ಅಕ್ಕನಿಗೆ ತನ್ನ ಕೋರಿಕೆಯನ್ನು ತಿಳಿಸಿದಳು. ಪ್ರೊ|| ಕರ್ವೆಯವರು ಪಾರ್ವತೀಬಾಯಿಯ ಸಂಕಲ್ಪ ವನ್ನು ಕೇಳಿ ಬಹಳ ಸಂತೋಷ ಪಟ್ಟರು.

ಕೊನೆಗೆ ಪಾರ್ವತೀಬಾಯಿಯನ್ನು ಹುಜುರ್ ಪಾಗ್ ಎಂಬಲ್ಲಿ ಹೆಣ್ಣು ಮಕ್ಕಳಿಗಾಗಿ ಸ್ಥಾಪಿಸಲಾಗಿದ್ದ ಸ್ಕೂಲಿನ ಎರಡನೆಯ ತರಗತಿ ಯಲ್ಲಿ ಬಹಳ ಪ್ರಯಾಸದಿಂದ ಸೇರಿಸಿದುದಾಯಿತು. ಅಲ್ಲಿದ್ದ ಅರವತ್ತು ಮಂದಿ ಹುಡುಗಿಯರೂ ಎಂಟು ಹತ್ತು ವರ್ಷದವರೇ. ಆ ಚಿಕ್ಕ ಮಕ್ಕಳ ಮಧ್ಯೆ ವಿರೂಪ ಹೊಂದಿದ ಬ್ರಾಹ್ಮಣ ವಿಧವೆಯು ಕುಳಿತು ಪಾಠ ಕಲಿಯುವುದೆಂದರೆ ಎಷ್ಟು ಹಾಸ್ಯಾಸ್ಪದವಾಗಿರಬಹುದೋ ಊಹಿಸೋಣ. ಆದರೂ ಧೈರ್ಯಗೆಡದೆ ಪಾರ್ವತೀಬಾಯಿಯು ಆ ಚಿಕ್ಕ ಸಹಾಧ್ಯಾಯಿಗಳಲ್ಲಿ ಸ್ನೇಹಬೆಳೆಸಿ ಅವರ ಸಹಾಯದಿಂದ ಆ ವರ್ಷದ ಪರೀಕ್ಷೆಯಲ್ಲಿ ಉತ್ತೀರ್ಣ ಳಾದಳು. ಇನ್ನು ಮುಂದಿನ ತರಗತಿಗಳಲ್ಲಿ ಅಷ್ಟು ಕಷ್ಟವಾಗಲಿಲ್ಲ. ಬಹಳ

ಕಷ್ಟಪಟ್ಟು ವ್ಯಾಸಂಗಮಾಡುತ್ತ ಬಂದುದರಿಂದ ಎಲ್ಲ ಪರೀಕ್ಷೆಗಳಲ್ಲಿಯೂ ಉತ್ತಮ ವರ್ಗದಲ್ಲಿಯೇ ತೇರ್ಗಡೆ ಹೊಂದಿದಳು. ಉಪಾಧ್ಯಾಯಿನಿಯರ ಶಿಕ್ಷಣ ಶಾಲೆಗೆ ಸೇರಿದಾಗ ವಿಧ್ಯಾರ್ಥಿವೇತನವೂ ಬಂದಿತು. ಪಾರ್ವತಿಯು ಅಲ್ಲಿಯೂ ಚೆನ್ನಾಗಿ ವ್ಯಾಸಂಗಮಾಡಿ ಶ್ರೇಷ್ಠವರ್ಗದ ಯೋಗ್ಯತಾಪತ್ರವನ್ನು ಸಂಪಾದಿಸಿದಳು.

ಈ ವೇಳೆಗೆ ಪ್ರೊ|| ಕರ್ವೆಯವರು ಪುಣೆಯ ಸಮೀಪವಲ್ಲಿಯೇ ಇರುವ ಹಿಂಗಣೆ ಎಂಬಲ್ಲಿ "ವಿಧವಾಶ್ರಮ"ವನ್ನು ಸ್ಥಾಪಿಸಿದ್ದರು. ಪಾರ್ವತೀಬಾಯಿಯು ಉಪಾಧ್ಯಾಯ ಶಿಕ್ಷಣವನ್ನು ಮುಗಿಸಿಕೊಂಡು ಬಂದ ಮೇಲೆ ಆಕೆಯನ್ನು ಆಶ್ರಮದಲ್ಲಿ ಉಪಾಧ್ಯಾಯಿನಿಯನ್ನಾಗಿ ಮಾಡಬೇಕೆಂದು ಪ್ರೊ|| ಕರ್ವೆಯವರ ಯೋಚನೆ. ಆದರೆ ವಿದ್ಯಾರ್ಥಿವೇತನಹೊಂದಿ ತೇರ್ಗಡೆಯಾದವರು ಸರ್ಕಾರಿ ಶಾಲೆಗಳಲ್ಲಿ ಮೂರು ವರ್ಷಗಳ ಕಾಲ ಪಾಠಹೇಳಬೇಕೆಂಬ ಸರ್ಕಾರಿ ನಿಬಂಧನೆ ಇದ್ದಿತು. ಆದರೂ ಆಗ ವಿದ್ಯಾಖಾತೆಯ ಮುಖ್ಯಾಧಿಕಾರಿಗಳಾಗಿದ್ದ ಪ್ರೊ|| ಸೆಲ್ಬಿಯವರು ಕರ್ವೆಯವರಿಗೆ ಯಾವ ನಿರ್ಬಂಧವೂ ಇಲ್ಲದೆ ಪಾರ್ವತೀಬಾಯಿಯು "ವಿಧವಾಶ್ರಮ"ದಲ್ಲಿ ಪಾಠಹೇಳಲು ಅಪ್ಪಣೆಕೊಡಿಸಿಕೊಟ್ಟರು.

ಪಾರ್ವತೀಬಾಯಿಯು ಶಿಕ್ಷಣ ಶಾಲೆಯಲ್ಲಿದ್ದಾಗ ರಜಾದಿನಗಳನ್ನು ಹಿಂಗಣೆಯಲ್ಲಿ ಕಳೆಯಲೆಂದು ಪ್ರೊ|| ಕರ್ವೆಯವರು ಆಕೆಯನ್ನು ಹಿಂಗಣೆಗೆ ಕರೆದುಕೊಂಡು ಹೋಗುತ್ತಿದ್ದರು. ಆಗ ಹಿಂಗಣೆಗೆ ಇನ್ನೂ ರಸ್ತೆಯಾಗಿರಲಿಲ್ಲ. ಹೊಲಗದ್ದೆಗಳಲ್ಲಿಯೂ, ಕಾಲುವೆ ಕಟ್ಟೆಯ ಮೇಲೆಯೂ ಹಾದುಹೋಗಬೇಕಾಗಿತ್ತು. ಹೀಗೆ ನಡೆದು ಹೋಗುವಾಗ ಕರ್ವೆಯವರು ಹಿಂದೂ ವಿಧವೆಯರ ಕಷ್ಟಗಳು, ಅವರ ವಿದ್ಯಾಭ್ಯಾಸದ ಆವಶ್ಯಕತೆ, ವಿತಂತು ಶರಣಾಲಯಗಳ ಸ್ಥಾಪನೆಯ ಆವಶ್ಯಕತೆ ಮುಂತಾದುವುಗಳನ್ನು ಕುರಿತು ಚರ್ಚಿಸುತ್ತಿದ್ದರು. ಈ ಸಂಭಾಷಣೆಗಳಿಂದ ಪ್ರೊ|| ಕರ್ವೆಯವರ ಅಭಿಪ್ರಾಯಗಳು ಆಕೆಗೆ ಚೆನ್ನಾಗಿ ಮಂದಟ್ಟಾದುವು. ಗುರುಗಳ ಈ ಮಾತುಕತೆಗಳ ಪರಿಣಾಮವಾಗಿ ತಾನು ಯಾವಜ್ಜೀವವೂ "ವಿಧವಾಶ್ರಮ"ಕ್ಕೆ ಸೇವೆ ಮಾಡಬೇಕೆಂದು

ಸಂಕಲ್ಪಿಸಿ ಕೊಂಡಳು. ತನ್ನಿಂದ ಇದುವರೆಗೂ ದೇಶಕ್ಕೂ ಮತ್ತು ಆಶ್ರಮಕ್ಕೂ ಏನಾದರೂ ಸೇವೆಯಾಗಿರುವುದಾದರೆ ಅದೆಲ್ಲಕ್ಕೂ ತಮ್ಮ ಪೂಜ್ಯ ಗುರುಗಳಾದ ಕರ್ವೆಯವರು ಹಿಂಗಣೆಯ ದಾರಿಯಲ್ಲಿ ನಡೆಸುತ್ತಿದ್ದ ಸಂಭಾಷಣೆಗಳೇ ಕಾರಣವೆಂದು ಪಾರ್ವತೀಬಾಯಿಯು ಅಡಿಗಡಿಗೆ ಹೇಳುವಳು.

## ೬. ಮನಸ್ಸಿನ ಪರಿವರ್ತನೆ

ಪಾರ್ವತೀಬಾಯಿಗೆ ವಿದ್ಯೆಯಿಂದ ಪುನರ್ಜನ್ಮ ಬಂದಂತಾಯಿತು. ವಿಶಾಲಪ್ರಪಂಚದಲ್ಲಿ ಹುಟ್ಟಿದ ಸಣ್ಣ ಮಗುವು ಅಲ್ಪಕಾಲದಲ್ಲಿಯೇ ತನ್ನ ಜ್ಞಾನಕ್ಷೇತ್ರವನ್ನು ವಿಸ್ತರಿಸಿಕೊಳ್ಳುವಂತೆ ಪಾರ್ವತೀಬಾಯಿಯು ವಿದ್ಯೆ ಕಲಿಯಲು ಪ್ರಾರಂಭಿಸಿದ ಕೂಡಲೇ ಅನೇಕ ಮುಖ್ಯವಾದ ವಿಷಯಗಳನ್ನು ತಿಳಿದುಕೊಳ್ಳಲು ಒಳ್ಳೆಯ ಅವಕಾಶ ಒದಗಿತು. ಆಕೆಯು ಪುಣೆಗೆ ಬಂದುದಕ್ಕೂ ವಿಧವಾಶ್ರಮದಲ್ಲಿ ಸೇರಿ ಕೆಲಸ ಮಾಡುವುದಕ್ಕೂ ಮಧ್ಯೆ ಕ್ರಮೇಣ ಆಕೆಯ ಮನಸ್ಸು ಪರಿವರ್ತನೆ ಹೊಂದುತ್ತ ಬಂದಿತು. ಇದಕ್ಕೆಲ್ಲಾ ಬಾಯಳ ಮದುವೆಯೇ ಮುಖ್ಯಕಾರಣವಲ್ಲವೇ! ಪಾರ್ವತೀಬಾಯಿಯನ್ನು ಬಾಯಳು ಪುಣೆಯಲ್ಲಿ ನಿಲ್ಲಿಸಿಕೊಂಡು ವಿದ್ಯೆ ಕಲಿಸದೆ ಇದ್ದಿದ್ದರೆ ಇತರ ವಿಧವೆಯರಂತೆ ಪಾರ್ವತೀಬಾಯಿಯು ತನ್ನ ಅದೃಷ್ಟವನ್ನು ನಿಂದಿಸುತ್ತ ತಂದೆಯ ಮನೆಯಲ್ಲಿದ್ದುಕೊಂಡು ಪೂಜೆ ಪುನಸ್ಕಾರಾದಿಗಳಲ್ಲಿಯೂ ತೀರ್ಥಯಾತ್ರೆಗಳಲ್ಲಿಯೂ ಕಾಲವನ್ನು ಕಳೆಯಬೇಕಾಗಿತ್ತು.

ವಿದ್ಯಾಭ್ಯಾಸದಿಂದಲೂ, ಗುರುಗಳಾದ ಕರ್ವೆಯವರ ಉಪದೇಶದಿಂದಲೂ ಪಾರ್ವತೀಬಾಯಿಯು ತನ್ನ ಕರ್ತವ್ಯವನ್ನು ಅರಿತುಕೊಂಡಳು. ಹಿಂದೂ ವಿಧವೆಯರ ಶೋಚನೀಯ ಸ್ಥಿತಿಯು ಆಕೆಯ ಕಣ್ಣಿಗೆ ಕಟ್ಟಿದಂತಾಯಿತು. "ತನ್ನ ಹಾಗೆಯೇ ವೈಧವ್ಯದಶೆಯಲ್ಲಿರುವ ಸಹೋದರಿಯರ ಉದ್ಧಾರಕ್ಕಾಗಿ ಯಾವಜ್ಜೀವವೂ ಶ್ರಮಿಸುವುದರ ಮೂಲಕ ಮಾತ್ರವೇ ಮಾತೃಭೂಮಿಯ ಸೇವೆ ಮಾಡಬಹುದು" ಎಂದು ಸ್ಥಿರ ಸಂಕಲ್ಪ ಮಾಡಿಕೊಂಡಳು. ಹೀಗೆ ಅನೇಕ ಸುಧಾರಣೆಗಳ ಆವಶ್ಯಕತೆಯನ್ನು ಮುಂದಟ್ಟು ಮಾಡಿಕೊಳ್ಳುತ್ತಿದ್ದ ಸಮಯದಲ್ಲಿ, "ವಿತಂತುಗಳಿಗೆ ಬಲಾತ್ಕಾರದಿಂದ ವಿರೂಪ ಮಾಡಿಸುವುದು ಸರಿಯೇ?" ಎಂಬ ಪ್ರಶ್ನೆ ತಲೆದೋರಿತು. ಪಾರ್ವತೀಬಾಯಿಯು ತಾನು ವಿರೂಪ ಮಾಡಿಸಿಕೊಂಡಾಗಲೂ, ವಿಧವಾಶ್ರಮದಲ್ಲಿ ಸೇರಿದ ಅನೇಕ ವರ್ಷಗಳ ವರೆಗೂ ವಿರೂಪಕರಣಪದ್ಧತಿಯೇ ಸರಿಯೆಂದುಕೊಂಡಿದ್ದಳು. ಅಷ್ಟೇಕೆ? ವಿಧವಾಶ್ರಮ

ದಲ್ಲಿ ಒಬ್ಬ ಹೆಂಗುಸು ತನ್ನ ಸಾಂಪ್ರದಾಯಿಕವಾದ ವಿಧವಾ ವೇಷವನ್ನು ಬದಲಾಯಿಸಿಕೊಂಡಾಗ ಪಾರ್ವತೀಬಾಯಿಯು, "ಆಕೆಯು ಮಾಡಿದುದು ಪಾಪ"ವೆಂದಳು. ಆದರೆ ಕ್ರಮೇಣ ಆಕೆಯ ಅಭಿಪ್ರಾಯವು ಬೇರೆಯಾಯಿತು. "ಗಂಡ ಹೋದವರು ನಿಜವಾಗಿಯೂ ವಿರಕ್ತಿ ತಾಳಿ, ಐಹಿಕ ಭೋಗ ಭೂಷಣಗಳೆಲ್ಲವನ್ನೂ ತ್ಯಜಿಸಲು ಸಂಕಲ್ಪಮಾಡಿಕೊಂಡು, ತಮ್ಮ ಇಚ್ಛೆಯಿಂದ ವಿರೂಪ ಹೊಂದುವುದರಲ್ಲಿ ಯಾವ ಆಕ್ಷೇಪವೂ ಇರುವುದಿಲ್ಲ. ಬಲಾತ್ಕಾರದಿಂದ ಕೇವಲ ಬಾಲಿಕೆಯರನ್ನೂ ಸಹ ಹಿಡಿದುಕೊಂಡು ಹೋಗಿ ವಿರೂಪ ಮಾಡುವುದು ಪೈಶಾಚಿಕವಲ್ಲದೆ ಮತ್ತೇನು?" ಎಂಬ ನಿರ್ಧಾರಕ್ಕೆ ಬಂದಳು. ಆದರೆ ಕೆಲವು ಅಭಿಪ್ರಾಯಗಳು ವ್ಯತ್ಯಾಸ ಹೊಂದಿದ ಮಾತ್ರಕ್ಕೆ ಆಕೆಗೆ ಹಿಂದಿನ ಪದ್ಧತಿಗಳಲ್ಲಿ ಗೌರವತಪ್ಪಿತೆಂದಲ್ಲ. ಎಷ್ಟೋ ವಿಷಯಗಳಲ್ಲಿ ನಮ್ಮ ಹಿರಿಯರ ಪದ್ಧತಿಗಳೇ ನಮಗೆ ಅತ್ಯುತ್ತಮವಾದುವೆಂದು ಆಕೆಯು ಪ್ರಪಂಚದ ಅನೇಕ ದೇಶಗಳನ್ನು ಸುತ್ತಿ ಬಂದಮೇಲೂ ಹೇಳಿರುವಳು.

ಪಾರ್ವತೀಬಾಯಿಯು ಸಮಾಜ ಸುಧಾರಕರೆನಿಸಿದ ಪ್ರೊ|| ಕರ್ವೆಯವರ ಮನೆಯಲ್ಲಿದ್ದುದನ್ನು ಕಂಡು ಅನೇಕರು, "ನೀವೂ ಪುನಃ ಮದುವೆ ಮಾಡಿಕೊಳ್ಳುವಿರಾ?" ಎಂದು ಕೇಳುತ್ತಿದ್ದರಂತೆ. ಬಾಯಿಳಿಗೆ ಮದುವೆಯಾದಾಗ ತಮ್ಮ ತಂದೆಯವರಂತೆ ಪಾರ್ವತೀಬಾಯಿಯೂ ಸಂತೋಷಪಟ್ಟಿದ್ದಳಾದರೂ, ತನ್ನನ್ನು ಈ ಪ್ರಶ್ನೆ ಕೇಳಿದಾಗ ಅಸಮಾಧಾನಪಟ್ಟುಕೊಳ್ಳುತ್ತಿದ್ದಳು. "ಒಂದೆರಡು ಮಕ್ಕಳಾಗಿ ಗೃಹಸ್ಥಧರ್ಮದ ಕಷ್ಟಸುಖಗಳನ್ನು ಕೆಲವು ವರ್ಷಗಳಾದರೂ ಅನುಭವಿಸಿದವರು ಮತ್ತೆ ಸಂಸಾರ ಬಂಧನಕ್ಕೆ ಸಿಕ್ಕಿ ತೊಳಲುವುದಕ್ಕಿಂತ ವಿರಕ್ತಿಯಿಂದ ಇದ್ದುಕೊಂಡು ತಮ್ಮ ಪವಿತ್ರವಾದ ಕಾಲವನ್ನು ಪರೋಪಕಾರದಲ್ಲಿ ಕಳೆಯುವುದೇ ವಿಧವೆಯರಿಗೆ ಉತ್ತಮ ಧರ್ಮ" ಎಂಬುದು ಆಕೆಯ ಮತ. ಆಕೆಯು ತನ್ನ ಜೀವಮಾನವನ್ನೆಲ್ಲಾ ವಿಧವಾಶ್ರಮಕ್ಕೆ ಧಾರೆ ಎರದುದ್ದೇ ಇದಕ್ಕೆ ನಿದರ್ಶನ.

## ೭. ವಿಧವಾಶ್ರಮದ ಕೆಲಸಕ್ಕೆ ತೊಡಗಿದುದು

ವಿಧವಾಶ್ರಮವು ೧೯೦೨ರಲ್ಲಿ ಪ್ರಾರಂಭವಾಯಿತು. ಪ್ರಾರಂಭ ದಶೆಯಲ್ಲಿ ಅದು ಈಗಿನಂತೆ ಇರಲಿಲ್ಲ. ಆಗ ಅದು ಮಣ್ಣಿನ ಗೋಡೆಗಳಿಂದಲೂ, ನಾಡು ಹೆಂಚುಗಳಿಂದಲೂ ಕಟ್ಟಿದ ಮೂರು ಕೊಠಡಿಗಳ ಒಂದು ಗುಡಿಸಿಲು. ಒಂದು ಕೊಠಡಿ ಪಾಠಕ್ಕೆ, ಒಂದು ಅಡಿಗೆ ಊಟಗಳಿಗೆ, ಒಂದು ಮಲಗುವುದಕ್ಕೆ. ಇದರಲ್ಲಿ ಹದಿನೆಂಟು ಮಂದಿ ವಿಧವೆಯರಿದ್ದರು. ಪಾರ್ವತೀಬಾಯಿಯು ಈ ಆಶ್ರಮದಲ್ಲಿ ಆಳಿನಿಂದ ಹಿಡಿದು ಸೂಪರಿಂಟೆಂಡೆಂಟರ ವರೆಗೂ ಎಲ್ಲ ಕೆಲಸಗಳನ್ನೂ ಮಾಡಬೇಕಾಗಿತ್ತು. ಪ್ರೊ|| ಕರ್ವೆಯವರೂ ಮತ್ತೊಬ್ಬ ಉಪಾಧ್ಯಾಯರೂ ಪಾಠಗಳನ್ನು ಹೇಳುತ್ತಿದ್ದರು. ೧೯೦೫–೬ ಇಸವಿಯಲ್ಲಿ ಈ ಮನೆಗೆ ಸೇರಿದ ಹಾಗೆ ಒಂದು ಪಡಸಾಲೆ ಹಾಕಿಸಿದರು. ಆ ಮೇಲೆ ಶ್ರೀ ಕಾಶೀಬಾಯಿ ದೇವಧರ್, ಶ್ರೀ ವೇಣೂಬಾಯಿ ನಾಮ ಜೋಷಿ, ಶ್ರೀ ಬನೂಬಾಯಿ ದೇಶಪಾಂಡೆ ಎಂಬುವರು ಆಜೀವ ಸದಸ್ಯರಾಗಿ ಸೇರಿದರು. ಇವರು ಬಂದ ಮೇಲೆ ಕೆಲಸವು ಎಲ್ಲರಿಗೂ ಹಂಚಲ್ಪಟ್ಟಿತು.

ಮುಂದೆ ಆಶ್ರಮದ ಅಭಿವೃದ್ಧಿಗಾಗಿ ನಡೆಯಬೇಕಾಗಿದ್ದ ಅನೇಕ ಕಾರ್ಯಗಳಿಗಾಗಿ ವಿಶೇಷ ಹಣವನ್ನೊದಗಿಸಬೇಕಾಯಿತು. ಈ ಹಣ ಶೇಖರಿಸುವ ಕೆಲಸಕ್ಕೆ ಪಾರ್ವತೀಬಾಯಿಯನ್ನೇ ಗೊತ್ತುಮಾಡಿದರು. "ಅಡಿಗೆಯವಳಾಗಿ ಆಶ್ರಮಕ್ಕೆ ಸೇರಿದ ನಾನು ಈ ಜವಾಬ್ದಾರಿಯನ್ನು ವಹಿಸಬಲ್ಲೆನೆ?" ಎಂದು ಆಕೆಯು ಶಂಕಿಸಿದಳು. ಆಕೆಯು ಕೊಂಕಣದ ಹಳ್ಳಿ ಮನೆಯಲ್ಲಿದ್ದಾಗ ಮುಂದೆ ಹೀಗೆ ದೇಶಾಟನೆ ಮಾಡಿ ಆಶ್ರಮದ ಅಭಿವೃದ್ಧಿಕಾರ್ಯದಲ್ಲಿ ಮುಖ್ಯಪಾತ್ರ ವಹಿಸುವಳೆಂದು ಯಾರು ತಾನೆ ನೆನೆದಿದ್ದರು!

ಪ್ರೊ|| ಕರ್ವೆಯವರು ಫೆರ್ಗ್ಯುಸನ್ ಕಾಲೇಜಿನ ಗಣಿತಶಾಸ್ತ್ರಾಧ್ಯಾಪಕರಾಗಿದ್ದುದಷ್ಟೆ. ತಮ್ಮ ರಜಾಕಾಲದಲ್ಲಿ ವಿಧವಾಶ್ರಮದ ಚಂದಾ ಕೆಲಸಗಳಿಗಾಗಿ ಊರೂರುಗಳನ್ನು ಸುತ್ತಿ ಹಣ ಶೇಖರಿಸಿ ತರುತ್ತಿದ್ದರು. ಇದು ವರೆಗೂ ಈ ಕೆಲಸವನ್ನು ಅವರೊಬ್ಬರೇ ಮಾಡುತ್ತಿದ್ದರು. ಒಂದು

ದಿವಸ ಕರ್ವೆಯವರು ಎತ್ತಿನ ಗಾಡಿಯಲ್ಲಿ ಹಿಂಗಣೆಯ ಕಚ್ಚಾ ರಸ್ತೆಯಲ್ಲಿ ಹೋಗುತ್ತಿದ್ದಾಗ ದಾರಿಯಲ್ಲಿ ಎತ್ತು ಮುಗ್ಗರಿಸಿ ಗಾಡಿ ತಲೆಕೆಳಗಾಯಿತು. ಕರ್ವೆಯವರಿಗೆ ತುಂಬಾ ಗಾಯಗಳಾದುವು. ಅಲ್ಲಿಂದ ಅವರನ್ನು ಹಿಂಗಣೆಗೆ ಹೊತ್ತುಕೊಂಡು ಹೋಗಿ ಔಷಧೋಪಚಾರ ಮಾಡಿದ ಮೇಲೆ ಜ್ಞಾನ ಬಂದಿತಂತೆ. ಇನ್ನು ಕೆಲವು ದಿವಸಗಳಲ್ಲಿ ಸಂಚಾರ ಹೊರಡಬೇಕೆಂದಿದ್ದ ಕರ್ವೆಯವರ ಈ ಸ್ಥಿತಿಯು ಪಾರ್ವತೀಬಾಯಿಯನ್ನು ಯೋಚನೆಯಲ್ಲಿ ಮುಳುಗಿಸಿತು. ಇನ್ನೊಂದು ಸಲವೇನಾದರೂ ಇಂಥ ಅಪಾಯ ಸಂಭವಿಸಿದಲ್ಲಿ ವಿಧವಾಶ್ರಮಕ್ಕೇ ವೈಧವ್ಯ ಬಂದೀತೆಂದು ಆಕೆಗೆ ಭಯವಾಯಿತು. ಆಕೆಯು ಗುರುಗಳ ಹಾಸಿಗೆಯ ಬಳಿ ಕುಳಿತು, "ತಮಗೆ ಈಗ ಬಹಳ ಘಾಸಿಯಾಗಿದೆ. ಮತ್ತೊಮ್ಮೆ ಇಂತಹ ಅನಾಹುತವೇನಾದರೂ ಸಂಭವಿಸಿದರೆ ಆಶ್ರಮದ ಗತಿ ಏನು? ಆದುದರಿಂದ ಚಂದಾ ವಸೂಲಿ ಕಾರ್ಯದಲ್ಲಿ ನನ್ನನ್ನೂ ತಮ್ಮ ಸಹಾಯಕ್ಕೆ ತೆಗೆದುಕೊಳ್ಳಿ. ಈ ಸಲ ನನ್ನ ಕೈಯ್ಯಲ್ಲಿ ಏನಾದರೂ ಸಾಧ್ಯವಾದರೆ ನೋಡುತ್ತೇನೆ. ಅದರಿಂದ ನಿಮಗೆ ಶ್ರಮ ಕಡಿಮೆಯಾದೀತು" ಎಂದಳು. ಅದಕ್ಕೆ ಗುರುಗಳು ಸಂತೋಷದಿಂದ ಅನುಮತಿಯಿತ್ತರು.

ಆಶ್ರಮದ ಒಬ್ಬ ಹುಡುಗಿಯು ರಜೆಯಲ್ಲಿ ಅವಳ ಊರಾದ ಖಾಂಡವಕ್ಕೆ ಹೋಗಲು ರೈಲ್ವೆ ಪಾಸ್ ಇತ್ತು. ಆ ಪಾಸಿನಲ್ಲಿ ಅವಳಲ್ಲದೆ ಒಬ್ಬ ಆಳಿಗೂ ಅನುಕೂಲವಿದ್ದಿತು. ಪಾರ್ವತೀಬಾಯಿಯು ತನ್ನ ಕೆಲಸ ಕೈಗೂಡುವುದಕ್ಕೆ ಮೊದಲೇ ಆಶ್ರಮದ ಹಣವನ್ನು ದುಂದು ಮಾಡಲು ಇಷ್ಟಪಡದೆ ಈ ಪಾಸಿನ ಸಹಾಯದಿಂದ ಖಾಂಡವದ ವರೆಗೂ ಪ್ರಯಾಣ ಮಾಡಲು ನಿಶ್ಚಯಿಸಿದಳು. ಆ ವೇಳೆಗೆ ಕರ್ವೆಯವರೂ ಗುಣ ಹೊಂದಿ ಪ್ರಯಾಣಮಾಡುವುದರಲ್ಲಿದ್ದರು. ಅವರ ಅನುಮತಿ ಪಡೆದು ಪಾರ್ವತೀಬಾಯಿಯು ಪ್ರಯಾಣಕ್ಕೆ ಅಣಿಯಾದಳು. ನಾಳೆ ಹೊರಡಬೇಕು ಎನ್ನುವಲ್ಲಿ ಆಕೆಯ ಮಗ ನಾನನಿಗೆ ವಿಪರೀತ ಜ್ವರ ಬಂದುಬಿಟ್ಟಿತು. ಪಾರ್ವತೀಬಾಯಿಗೆ ದಿಕ್ಕು ತೋರದಾಯಿತು. ಗುರುಗಳ ಸಲಹೆ ಕೇಳಲು ಅವರು "ನಿನ್ನ ಮಗನನ್ನು ಶ್ರೀ ಕಾಶೀಬಾಯಿ ಮತ್ತು ವೇಣೂಬಾಯಿಯವರಿಗೆ ಒಪ್ಪಿಸು. ಅವರು ನಿನ್ನಂತೆಯೇ ನಿನ್ನ ಮಗನನ್ನು ನೋಡಿ

ಕೊಳ್ಳಬಲ್ಲರು" ಎಂದರು. ಪಾರ್ವತೀಬಾಯಿಯು ತನ್ನ ಮಗನನ್ನು ಸಹೋದ್ಯೋಗಿನಿಯರ ವಶಕ್ಕೆ ಕೊಟ್ಟಳು. ಆ ಸಹೋದ್ಯೋಗಿನಿಯರು ಅದೇ ಮೇರೆಗೆ ಪಾರ್ವತೀಬಾಯಿಯು ಆಶ್ರಮದ ಕಾರ್ಯಗಳಿಗಾಗಿ ಪ್ರವಾಸಮಾಡಿದ ಎಷ್ಟೋ ಸಮಯಗಳಲ್ಲಿ ಆಕೆಯ ಮಗನನ್ನು ಬಹಳ ಆದರದಿಂದ ನೋಡಿಕೊಳ್ಳುತ್ತಿದ್ದರೆಂದು ಬೇರೆ ಹೇಳಬೇಕಾಗಿಲ್ಲ.

ಮಗನನ್ನು ಸಹೋದ್ಯೋಗಿನಿಯರಿಗೆ ಒಪ್ಪಿಸಿ ಪಾರ್ವತೀಬಾಯಿಯು ಖಾಂಡವಕ್ಕೆ ಸೇರಿದ್ದಾಯಿತು. ಅಲ್ಲಿ ಪುರಪ್ರಮುಖರೆನಿಸಿದವರನ್ನು ಕಂಡು "ಒಂದು ಸಭೆಯನ್ನು ಸೇರಿಸಿ, ನನ್ನ ಉಪನ್ಯಾಸಕ್ಕೆ ಅವಕಾಶ ಕಲ್ಪಿಸಿ ಕೊಡುವಿರಾ?" ಎಂದು ಬೇಡುತ್ತಿದ್ದಳು. ಈಕೆಯ ಉಪನ್ಯಾಸವೆಂದರೆ ಎಲ್ಲರಿಗೂ ನಗು. "ಈ ಮುಡಿ ಹೆಂಗುಸು ಉಪನ್ಯಾಸ ಮಾಡುತ್ತಾಳಂತೆ" ಎಂದು ಹಾಸ್ಯಮಾಡಿದರಂತೆ. ಕೊನೆಗೆ, ಒಬ್ಬ ಜಮಿಾನುದಾರನು ಪಾರ್ವತೀಬಾಯಿಯ ಮಾತಿಗೆ ಗೌರವಕೊಟ್ಟು "ಪ್ರತಿನಿತ್ಯವೂ ಸಾಯಂಕಾಲ ನಮ್ಮ ಮನೆಗೆ ಆರಾಮಕ್ಕಾಗಿ ಕೆಲವು ಜನರು ಬರುತ್ತಾರೆ. ಆ ಸಮಯದಲ್ಲಿ ನೀವು ಬಂದು ಉಪನ್ಯಾಸ ಹೇಳಿದರೆ ನಿಮಗೆ ಅನುಕೂಲವಾದೀತು" ಎಂದನು. ಪಾರ್ವತೀಬಾಯಿ ಗೊತ್ತಾದ ವೇಳೆಗೆ ಸರಿಯಾಗಿ ಅಲ್ಲಿಗೆ ಹೋದಳು. ಅಲ್ಲಿ ಹತ್ತು ಹನ್ನೆರಡು ಜನರು ನೇರಿ ವಿನೋದವಾಗಿದ್ದರು. ಪಾರ್ವತೀಬಾಯಿ ಜಮಿಾನ್ದಾರನ ಅಪ್ಪಣೆಯಮೇರೆ ಒಂದು ಉಪನ್ಯಾನವನ್ನು ಹೇಳಿ ಚಂದಾಪಟ್ಟಿಯನ್ನು ಮುಂದಿಟ್ಟ ಕೂಡಲೇ ಹದಿಮೂರು ರೂಪಾಯಿಗಳು ಬಂದುವಂತೆ. ಪಾರ್ವತೀಬಾಯಿಯು ಅಲ್ಲಿ ನೇರಿದ್ದವರೂ ಎಲ್ಲರಂತೆಯೇ ಎಲ್ಲಿ ಹಾಸ್ಯಮಾಡುವರೋ ಎಂದು ಭಯಪಟ್ಟಿದ್ದುದರಿಂದ ಈ ಹದಿಮೂರು ರೂಪಾಯಿಗಳು ಬಂದುದಕ್ಕೆ ಆಕೆಗೆ ಒಂದು ನೂರ ಹದಿಮೂರು ರೂಪಾಯಿಗಳು ಬಂದಷ್ಟು ಸಂತೋಷವಾಯಿತು.

ಮೊಟ್ಟಮೊದಲ ಪ್ರಯತ್ನವೇ ಫಲಿಸಿದುದರಿಂದ ಪಾರ್ವತೀಬಾಯಿಗೆ ಧೈರ್ಯ ಬಂತು. ಅನಂತರ ಇಂದೂರು ಸಂಸ್ಥಾನಕ್ಕೆ ಹೋಗಿ ಅನೇಕ ಅಧಿಕಾರಿಗಳನ್ನು ಕಂಡಳು. ಅವರು ಇವತ್ತಾಗಲಿ ನಾಳೆಯಾಗಲಿ ಎಂದು ನುಣುಚಿಕೊಂಡು ಬಿಟ್ಟರಂತೆ. ಕಡೆಗೆ ಕಾಲೇಜಿನ ವಿದ್ಯಾರ್ಥಿ

ಗಳಾದ ಶ್ರೀ ಗರುಡ್, ಶ್ರೀದೇವ್ ಎಂಬಿಬ್ಬರ ಸಹಾಯದಿಂದ ಸಭೆಯೊಂದನ್ನು ಸೇರಿಸಿ ಉಪನ್ಯಾಸ ಕೊಟ್ಟು ಆ ಊರಿನಲ್ಲಿ ಒಂದು ನೂರು ರೂಪಾಯಿಗಳನ್ನು ವಸೂಲು ಮಾಡಿದಳು. ಅಲ್ಲಿಂದ ದೇವ್ ಎಂಬೂರಿನಲ್ಲಿಯೂ ಇದೇ ರೀತಿಯಾಗಿ ಆಶ್ರಮದ ಧ್ಯೇಯಗಳು, ಅದಕ್ಕೆ ಮಹಾಜನರಿಂದ ಒದಗಬೇಕಾದ ಸಹಾಯ, ಇವುಗಳನ್ನು ಹೃದಯಂಗಮವಾಗಿ ವಿವರಿಸಿ ಅಲ್ಲಿ ನಾಲ್ಕು ನೂರು ರೂಪಾಯಿಗಳನ್ನು ಶೇಖರಿಸಿದಳು. ಹೀಗೆ ಒಟ್ಟು ಐದುನೂರು ರೂಪಾಯಿಗಳೊಂದಿಗೆ ಹಿಂದಿರುಗಿದ ಪಾರ್ವತೀಬಾಯಿಯ ಸಾಮರ್ಥ್ಯವನ್ನು ಪ್ರೊ|| ಕರ್ವೆಯವರು ಬಹಳ ಕೊಂಡಾಡಿ, ಯಾವ ಕೆಲಸದಲ್ಲಿಯಾಗಲಿ ಮನಃಪೂರ್ವಕವಾಗಿ ದುಡಿಯಬಲ್ಲವರೆಂದರೆ ಪಾರ್ವತೀಬಾಯಿಯೇ ಸರಿ ಎಂದು ಹೊಗಳಿದರು. ಅಲ್ಲಿಂದ ಮುಂದೆ ಆಶ್ರಮದ ಧ್ಯೇಯವನ್ನು ದೇಶದಲ್ಲೆಲ್ಲ ಪ್ರಚಾರ ಮಾಡುವ ಕಾರ್ಯವು ಪಾರ್ವತೀಬಾಯಿಯ ಪಾಲಿಗೆ ಬಂತು.

## ೮. ಚಂದಾ ವಸೂಲಿಯ ಅನುಭವ

ವಸೂಲಿ ಕೆಲಸವು ತನ್ನ ಪಾಲಿಗೆ ಬಂದುದರಿಂದ ಪಾರ್ವತೀಬಾಯಿಯು ಅನೇಕ ಊರುಗಳನ್ನು ಸುತ್ತಬೇಕಾಯಿತು. ಉತ್ತರದಲ್ಲಿ ಡಿಲ್ಲಿಯವರೆಗೂ ದಕ್ಷಿಣದಲ್ಲಿ ರಾಮೇಶ್ವರದವರೆಗೂ ಪಶ್ಚಿಮದಲ್ಲಿ ಭಾವನಗರದವರೆಗೂ ಈಕೆ ತಿರುಗಿದ್ದಾಳೆ. ಉಪನ್ಯಾಸಗಳನ್ನು ಕೊಟ್ಟು, ವರ್ಷ ಒಂದಕ್ಕೆ ಸುಮಾರು ಮೂರು ನಾಲ್ಕು ಸಾವಿರ ರೂಪಾಯಿಗಳನ್ನು ಸಂಗ್ರಹಿಸುತ್ತಿದ್ದಾಳೆ. ೧೯೦೪ ರಿಂದ ಹಿಡಿದು ಇದುವರೆಗೂ ಈಕೆಯು ವಿಧವಾ ಆಶ್ರಮಕ್ಕಾಗಿ ದ್ರವ್ಯ ಸಂಗ್ರಹ ಮಾಡುತ್ತಲೇ ಇರುವಳು. ಮಧ್ಯೆ ಅಮೆರಿಕೆಗೆ ಹೋಗಿದ್ದ ಮೂರು ವರ್ಷಗಳು, ಇಂಗ್ಲೀಷು ವ್ಯಾಸಂಗಕ್ಕಾಗಿ ಪಡೆದ ಮೂರು ವರ್ಷಗಳ ರಜೆ, ಬೊಂಬಾಯಿನಗರದಲ್ಲಿ ಒಂದು ಬಾಲಿಕಾ ಶಾಲೆಯಲ್ಲಿ ಸೂಪರ್ ವೈಸರ್ ಆಗಿದ್ದ ಒಂದು ವರ್ಷ ಅಂತು ಏಳು ವರ್ಷಗಳ ಕಾಲವನ್ನು ಬಿಟ್ಟು ಉಳಿದ ಕಾಲವನ್ನೆಲ್ಲ ಆಕೆಯು ಆಶ್ರಮಕ್ಕಾಗಿ ಹಣ ಶೇಖರಿಸುವುದರಲ್ಲಿಯೇ ಕಳೆದಿರುವಳು. ಹೋದ ಕಡೆಗಳಲ್ಲೆಲ್ಲ ಪುರ ಪ್ರಮುಖರ ಸಹಾಯದಿಂದ ಸಭೆಗಳನ್ನು ಸೇರಿಸುತ್ತಿದ್ದಳು. ಕೆಲವು ವೇಳೆ ವಿದ್ಯಾರ್ಥಿಗಳಿಗೂ ಮತ್ತೆ ಕೆಲವು ಸಲ ಮಹಿಳೆಯರಿಗೂ ನಮ್ಮದೇಶದ ವಿಧವೆಯರ ಗೋಳನ್ನೂ ಅದರ ನಿವಾರಣೋಪಾಯವನ್ನೂ ಮನಮುಟ್ಟುವಂತೆ ವರ್ಣಿಸಿ ಕಡೆಯಲ್ಲಿ ತಮ್ಮ ವಿಧವಾಶ್ರಮದ ಕಾರ್ಯಕ್ರಮಗಳನ್ನು ವಿವರಿಸಿ ಅದರ ಸಹಾಯಾರ್ಥವಾಗಿ ಹಣವನ್ನು ಕೋರುವುದು—ಇದೇ ಪಾರ್ವತೀಬಾಯಿಯ ನಿತ್ಯ ಕರ್ತವ್ಯವಾಯಿತು. ಮರಾಠಿ ತಿಳಿಯದ ಸ್ಥಳಗಳಲ್ಲಿ ತನ್ನ ಭಾಷಣವನ್ನು ಆಯಾ ಊರಿನ ದೇಶ ಭಾಷೆಗಳಿಗೆ ಪರಿವರ್ತಿಸಿ ಹೇಳಲು ಒಬ್ಬ ದ್ವಿಭಾಷಿಯ ಸಹಾಯವನ್ನು ತೆಗೆದು ಕೊಳ್ಳುತ್ತಿದ್ದಳು. ಆಕೆ ಅಷ್ಟಾಗಿ ಓದಿದವಳಲ್ಲ, ವಾಚಾಳಿಯಲ್ಲ. ಆದರೂ ಭಾಷಣಗಳನ್ನು ಮಾಡುವುದೇ ನಿತ್ಯದ ಕೆಲಸವಾಗಿ ಹೋದುದರಿಂದ ಕ್ರಮೇಣ ಆಕೆಯು ಸಭಿಕರ ಮನಸ್ಸನ್ನಾಕರ್ಷಿಸುವ ಹಾಗೆ ಭಾಷಣ ಮಾಡುವ ಸಾಮರ್ಥ್ಯವನ್ನು ಪಡೆದಳು. ಈ ಮುಡಿ ಹೆಂಗುಸು ಏನು ಭಾಷಣ ಮಾಡಬಲ್ಲಳೋ ಎಂದು ಕೊಂಡಿದ್ದವರೇ ಅನಂತರ ಆಕೆ

ಯನ್ನು ಕರೆಯಿಸಿಕೊಂಡು ಸಭೆಗಳಲ್ಲಿ ಭಾಷಣಗಳನ್ನಿಡಿಸತೊಡಗಿದರು.

೧೯೦೪ರಲ್ಲಿ ಬೊಂಬಾಯಿನ ಸಮಾಜ ಸುಧಾರಕರು ಒಂದು ಸಮ್ಮೇಳನವನ್ನು (Social Reform Conference) ಸರ್. ನಾರಾಯಣ ಚಂದಾವರ್ಕರ್‌ರವರ ಅಧ್ಯಕ್ಷತೆಯಲ್ಲಿ ಜರುಗಿಸಿದರು. ಆಗ ಪಾರ್ವತೀಬಾಯಿಯನ್ನು ಅಲ್ಲಿ ಭಾಷಣ ಮಾಡಲು ಕರೆಯಿಸಿದ್ದರು. ಈಕೆಯು ದೇವರುಕ್ಕನ್ನು ಬಿಟ್ಟು ಬಂದು ಪುಣೆಯಲ್ಲಿ ಓದುಬರೆಹ ಕಲಿತು, ವಿಧವಾಶ್ರಮದ ಆಜೀವ ಸದಸ್ಯೆಯಾದುದೇ ಆಕೆಯಲ್ಲಿ ಒಂದು ಮಹತ್ತರವಾದ ಸುಧಾರಣೆಯಷ್ಟೆ. ಅದರಿಂದ ಆಕೆಯೂ ಸಮಾಜ ಸುಧಾರಿಕೆಯೆಂದು ಎಣಿಸಲ್ಪಟ್ಟು ಆ ಸಭೆಯಲ್ಲಿ ಭಾಗವಹಿಸಲು ಆಹ್ವಾನಿತಳಾಗಿದ್ದಳು. ಆ ಸಭೆಯಲ್ಲಿ ಪಾರ್ವತೀಬಾಯಿಯು, "ನಮ್ಮ ಹೆಂಗುಸರು ಕೇವಲ ಅಂಧರಂತೆ ಎಲ್ಲದರಲ್ಲಿಯೂ ಪಾಶ್ಚಾತ್ಯರನ್ನು ಅನುಕರಿಸಬಾರದು; ಬಡವರಾದ ಸ್ತ್ರೀಯರು ತಾವೂ ಭಾಗ್ಯವಂತರೆನಿಸಿಕೊಳ್ಳಬೇಕೆಂದು ತಮ್ಮ ಯೋಗ್ಯತೆಗೆ ಮೀರಿದ ಆಡಂಬರವಾದ ಉಡುಪನ್ನು ಧರಿಸಿ ಅಪಹಾಸ್ಯಕ್ಕೆ ಗುರಿಯಾಗದೆ ಬಹಳ ನಿರಾಡಂಬರವಾದ ಉಡುಪನ್ನು ಧರಿಸುವುದನ್ನು ಕಲಿಯಬೇಕು," ಎಂದು ಬಹಳ ಸ್ವಾರಸ್ಯವಾದ ಭಾಷಣ ಮಾಡಿದರು. ಇದರ ಪರಿಣಾಮವಾಗಿ ಬರಿಯ ಮಾತಿನ ಸುಧಾರಕರಿಗೆ ಸ್ವಲ್ಪ ಬೇಸರವೂ ಆಯಿತು. ಆದರೆ ಉತ್ಸಾಹಗೊಂಡ ಕೆಲವು ಯುವಕರು ಆಕೆಯಲ್ಲಿ ತಮಗೆ ಉಂಟಾದ ಪೂಜ್ಯಭಾವದಿಂದ ಆ ಸಭೆಯಲ್ಲಿಯೇ, ಆಕೆಯ ಕೆಲಸಕ್ಕೆ ಸಹಾಯವಾಗುವಂತೆ ತಮ್ಮ ಟೋಪಿಗಳನ್ನು ಹಿಡಿದು ಚಂದಾ ಎತ್ತಿ ಕೊಟ್ಟರಂತೆ. ಈಕೆಯ ಭಾಷಣದಿಂದ ಕುಪಿತರಾದ ಮತ್ತೆ ಕೆಲವರು ಆಶ್ರಮದ ಪ್ರಚಾರಕಾರ್ಯಕ್ಕೆ ಪಾರ್ವತೀಬಾಯಿಯು ಸ್ವಲ್ಪವೂ ಅರ್ಹಳಲ್ಲವೆಂತಲೂ ಇನ್ನು ಮೇಲೆ ಆಕೆಯನ್ನು ಆ ಕೆಲಸಕ್ಕೆ ಕಳುಹಿಸಬಾರದೆಂತಲೂ ಪ್ರೊ|| ಕರ್ವೆಯವರಿಗೆ ಹೇಳಿದರು. ಈ ಭಾಷಣದಿಂದ ಆ ಸಮ್ಮೇಳನಕ್ಕೆ ಸಹಾಯವಾಯಿತೋ ಇಲ್ಲವೋ ಅದು ಬೇರೆಯ ವಿಷಯ, ಪಾರ್ವತೀಬಾಯಿಗಂತು ಮುಂದಿನ ಎಲ್ಲ ಕೆಲಸಗಳಿಗೂ ಬಹಳ ಅನುಕೂಲವಾಯಿತು. ಎಲ್ಲಿಗೆ ಹೋದರೂ ಸಮಾಜ

ಸುಧಾರಣ ಸಮ್ಮೇಳನದಲ್ಲಿ ಮಾತನಾಡಿದ ಹೆಂಗುಸು ಎಂಬ ಪ್ರಸಿದ್ಧಿ ಬಂತು.

ಅಮೆರಿಕದ ರೆವರೆಂಡ್ ಜಸ್ಟಿನ್ ಅಬ್ಬಾಟ್ ಎಂಬ ಮಹನೀಯರು ಈ ಸಭೆಯಲ್ಲಿದ್ದು ಪಾರ್ವತೀಬಾಯಿಯ ವಾದಸರಣಿಯನ್ನೂ ಜನರಿಗೆ ಅದರಿಂದ ಉಂಟಾದ ಮಹೋತ್ಸಾಹವನ್ನೂ ಬಹಳ ಮೆಚ್ಚಿಕೊಂಡಿದ್ದಾರೆ. ಪಾರ್ವತೀಬಾಯಿಯ ಆತ್ಮಕಥೆಯ ಇಂಗ್ಲಿಷ್ ಅನುವಾದವನ್ನು ಬರೆದಿರುವ ಮಹಾನುಭಾವರಿವರು.

# ೯. ಪ್ರವಾಸದ ಕಷ್ಟಗಳು

ದೇಶಾಟನೆಯಿಂದ ಪಾರ್ವತೀಬಾಯಿಯು ಅನೇಕ ವಿಷಯಗಳನ್ನು ತಿಳಿದುಕೊಂಡಳು. ಆದರೆ ಕೆಲವು ತೊಂದರೆಗಳನ್ನೂ ಅನುಭವಿಸಬೇಕಾಯಿತು. ಹೋದ ಕಡೆಯಲ್ಲೆಲ್ಲ ತನ್ನನ್ನು ಜನರಿಗೆ ಪರಿಚಯ ಮಾಡಿಸಿಕೊಳ್ಳುವುದಕ್ಕಾಗಿ ಮತ್ತೊಬ್ಬರಿಂದ ಸಿಫಾರಸು ಪತ್ರಗಳನ್ನು ತೆಗೆದುಕೊಂಡು ಹೋಗಬೇಕು. ಸಾಮಾನ್ಯವಾಗಿ ಸಭೆ ಸೇರುವುದೇ ಕಷ್ಟ. ಅದರಲ್ಲಿಯೂ ಮುಡಿ ಹೆಂಗುಸಿನ ಉಪನ್ಯಾಸ ಕೇಳುವುದೆಂದರೆ ಜನರಿಗೆ ಅಪಮಾನಕರವೆಂಬ ಭಾವನೆ. ಮೊದಮೊದಲು ಬಹಳ ಕಷ್ಟವಾಯಿತು. ಒಂದು ಸಲ ಧಾರವಾಡದ ಬಳಿ ಒಂದೂರಿಗೆ ಹೋದಾಗ ಈಕೆಗೆ ಒಂದು ಯೋಚನೆ ಹೊಳೆಯಿತಂತೆ. ಆ ಊರಿಗೆ ಹೋದಾಗ ಈಕೆಯ ಬಳಿ ಯಾವ ಶಿಫಾರಸು ಕಾಗದವೂ ಇರಲಿಲ್ಲ. ಯಾರ ಪರಿಚಯವೂ ಇರಲಿಲ್ಲ. ಅದರಿಂದ ಊರಿನ ಪೋಸ್ಟಾಫೀಸಿಗೆ ಹೋಗಿ ಅಲ್ಲಿಯ ಪೋಸ್ಟುಮಾಸ್ಟರಿಂದ ಊರಿನ ಗಣ್ಯರಾದ ಎಂಟು ಜನರ ವಿಳಾಸಗಳನ್ನು ತಿಳಿದುಕೊಂಡಳು. ಅಂಚೆ ಜವಾನನು ಸಂಚಾರ ಹೋದಾಗ ಅವರ ಮನೆಗಳನ್ನು ತೋರಿಸಿಕೊಟ್ಟನಂತೆ. ಈ ಉಪಾಯದಿಂದ ಆಕೆಯ ಕೆಲಸಕ್ಕೆ ಬಹಳ ಅನುಕೂಲವಾಯಿತು.

ಜನಸಾಮಾನ್ಯಕ್ಕೆ ಓದಿದ ಹೆಂಗುಸರ ವಿಷಯದಲ್ಲಿ ಯಾವ ಅಭಿಪ್ರಾಯವಿತ್ತೆಂಬುದನ್ನು ಪಾರ್ವತೀಬಾಯಿಯು ದೇಶಾಟನೆಯಿಂದ ಕಂಡುಕೊಂಡಳು. ಸಾಮಾನ್ಯವಾಗಿ ಜನತೆಯಲ್ಲಿ ಮೇಲಣ ವರ್ಗದವರು ಕೂಡ ಒಬ್ಬ ಉಪಾಧ್ಯಾಯಿನಿಯನ್ನಾಗಲಿ, ನರ್ಸನ್ನಾಗಲಿ ಮನೆಯೊಳಕ್ಕೆ ಸೇರಿಸುವುದಕ್ಕೆ ಇಷ್ಟಪಡುತ್ತಿರಲಿಲ್ಲ. ಉಪಾಧ್ಯಾಯಿನಿ ಎಂದರೆ ತನ್ನ ಕರ್ತವ್ಯಕ್ಕಿಂತ ಸೊಗಸುಗಾರಿಕೆಯಲ್ಲಿಯೇ ಹೆಚ್ಚು ಗಮನ, ತನ್ನ ಸಂಬಳದ ಬಡಾವಣೆ ಮತ್ತು 'ಪಿಂಚಣಿ'ಯ ನಿರೀಕ್ಷಣೆ, ಹಗಲಿರುಳೂ ಇತರ ಹೆಂಗುಸರೊಂದಿಗೆ ಸುಮ್ಮನೆ ಹರಟೆ ಹೊಡೆಯುತ್ತಿರುವುದು, ಕೆಲಸವೆಂದರೆ ಅಪಮಾನಕರವೆಂದು ಬಗೆಯುವುದು— ಇವಿಷ್ಟೇ ಅವಳ ಕಲ್ಯಾಣಗುಣಗಳು ಎಂಬ ಭಾವನೆಯು ಜನರಲ್ಲಿ ಬಂದು

ಹೋಗಿತ್ತು. ಪಾರ್ವತೀ ಬಾಯಿಯು ಒಂದು ಸಲ ಧಾರವಾಡದ ಒಬ್ಬ ಉನ್ನತಾಧಿಕಾರಿಗಳ ಮನೆಯಲ್ಲಿ ಇಳಿದುಕೊಳ್ಳಬೇಕಾಯಿತು. ಅವರು ಈಕೆಗೆ ಬೇರೆಯಾಗಿ ಒಂದು ಮನೆಯನ್ನು ಕೊಟ್ಟು ಒಬ್ಬ ಮಹಾರಾಣಿಯಂತೆ ಮರ್ಯಾದೆ ಮಾಡತೊಡಗಿದರಂತೆ. ಪಾರ್ವತೀ ಬಾಯಿಗೆ ಇದು ಒಪ್ಪುವುದೇ? ಆಕೆಯು ಇವರ ಮನೆಯೊಳಗೆ ಹೋಗಿ ಮನೆಯ ಎಲ್ಲ ಕೆಲಸಗಳಲ್ಲಿಯೂ ನೆರವಾಗಿ ಮನೆಯ ಯಜಮಾನಿಗೆ ತಂಗಿಯಂತೆ ಸಹಾಯ ಮಾಡತೊಡಗಿದಳು. ಅದನ್ನು ಕಂಡು ಆ ದಂಪತಿಗಳಿಬ್ಬರೂ, "ಇದೇನು ಪ್ಯಾಸುಮಾಡಿ ಉಪಾಧ್ಯಾಯಿನಿಯರಾಗಿರುವವರೂ ಕೆಲಸ ಮಾಡಬಹುದೆ! ನಿಮಗೂ ಇತರ ಓದಿದ ಹೆಂಗುಸರಿಗೂ ಶಾನೆ ವ್ಯತ್ಯಾಸವಿದೆಯಲ್ಲ" ಎಂದು ಆಶ್ಚರ್ಯಪಟ್ಟರು. ಹೀಗೆ ಆ ದಂಪತಿಗಳ ಅಭಿಮಾನವನ್ನು ಸಂಪಾದಿಸಿದುದು ಆಕೆಯ ಕೆಲಸಗಳಿಗೆ ಬಹಳ ಅನುಕೂಲವಾಯಿತು.

ದೇಶಾಟನೆಯಲ್ಲಿ ಕೇವಲ ಹಣ ಶೇಖರಿಸುವುದೊಂದೇ ಅಲ್ಲದೆ ಅಲ್ಲಲ್ಲಿ ವಿಧವೆಯರ ಸ್ಥಿತಿಗತಿಗಳು ಹೇಗಿವೆಯೆಂಬುದನ್ನೂ ಪಾರ್ವತೀ ಬಾಯಿಯು ವಿಚಾರಿಸುತ್ತಿದ್ದಳು. ದೊಡ್ಡ ಪಟ್ಟಣಗಳಲ್ಲಿ ಹೆಣ್ಣು ಮಕ್ಕಳಿಗೆ ಶಾಲೆಗಳೂ, ಒಂದೆರಡು "ವಿಡೋಸ್ ಹೋಂ"ಗಳೂ ಇರುವ ಮಾತ್ರದಿಂದಲೇ ವಿಧವೆಯರಿಗೆ ಎಲ್ಲಾ ಅನುಕೂಲಗಳೂ ಆಗಿವೆಯೆಂದು ಜನರಲ್ಲಿ ಅಭಿಪ್ರಾಯ ಬಂದು ಹೋಗಿದೆ. ಆದರೆ ಪುಣ್ಯಕ್ಷೇತ್ರಗಳೆನಿಸಿಕೊಂಡ ಕಡೆ ವಿಧವೆಯರ ಪಾಡು ಬಹಳ ಶೋಚನೀಯವಾಗಿದೆಯೆಂದೇ ಪಾರ್ವತೀಬಾಯಿಯ ಅಭಿಪ್ರಾಯ. ಉಡುಪಿಯು ಬಹು ದೊಡ್ಡ ಕ್ಷೇತ್ರವಷ್ಟೆ. ಅಲ್ಲಿಯ ಮಾಧ್ವಮಠದಲ್ಲಿ ಎಲ್ಲರಿಗೂ ಉಚಿತ ಭೋಜನ ಸೌಕರ್ಯವುಂಟು. ಆ ಊರಿನಲ್ಲಿ ಚಿಕ್ಕ ಮಗುವಾದರೂ ಸರಿಯೇ ಗಂಡ ಹೋದರೆ ವಿರೂಪ ಮಾಡಿಬಿಡುತ್ತಾರಂತೆ. ಸರಿಯಾಗಿ ಮೈ ಮುಚ್ಚಲು ಕೂಡ ಸಾಲದ ತುಂಡುಬಟ್ಟೆ. ಸಾಲದುದಕ್ಕೆ ಪಾಪ, ಅವರು ಸಂನ್ಯಾಸಿಗಳಂತೆ ತಮ್ಮ ಬೋಳುತಲೆಯನ್ನು ಬಿಟ್ಟುಕೊಂಡೇ ಬೀದಿಯಲ್ಲಿ ಸಂಚರಿಸಬೇಕು. ಇದರಿಂದ ಅವರಿಗೆ ಸದ್ಗತಿ ಮತ್ತು ಮಠಕ್ಕೆ ಬಹಳ ಕೀರ್ತಿ ಎಂದು ಜನರ ನಂಬಿಕೆ. ಇವರೆಲ್ಲ ಸಾಯಂಕಾಲದ ದೀಪಾರಾಧನೆಗೆ

ದೇವಸ್ಥಾನಕ್ಕೆ ಹೋಗುವುದು, ಅಲ್ಲಿ ಪ್ರಸಾದ ವಿನಿಯೋಗಕ್ಕೆ ಕೊಟ್ಟ ಒಂದು ಹಿಡಿ ಅವಲಕ್ಕಿಯನ್ನು ಬಾಯಲ್ಲಿ ಹಾಕಿಕೊಂಡು ದೇವಸ್ಥಾನದಲ್ಲಿಯೇ ಮಲಗುವುದು. ಸಂನ್ಯಾಸಿಗಳೂ ಸಾಧುಗಳೂ ಅಲ್ಲಿಯೇ ಮಲಗುವುದು. ಹೆಂಗುಸರಿಗೆ ಬೇರೆ ಗಂಡಸರಿಗೆ ಬೇರೆ ಸ್ಥಳದ ವ್ಯವಸ್ಥೆ ಇರತಕ್ಕುದು ಯುಕ್ತ. ಆದರೆ ಹಾಗೆ ಇಲ್ಲ. ಹೀಗೆ ಅಜ್ಞಾನಿಗಳಾದ ಆ ವಿಧವೆಯರು ಮೋಕ್ಷವನ್ನು ಹುಡುಕಿಕೊಂಡು ಮೌಢ್ಯದಿಂದ ಅಲೆಯುತ್ತಿರುವರು.

ಪಶ್ಚಿಮತೀರದ ಕೆಲವು ಕ್ಷೇತ್ರಗಳಲ್ಲಿ ವಿಧವೆಯರೂ ಸಂನ್ಯಾಸಿಗಳೂ ಎಷ್ಟು ಮಂದಿ ಬಂದರೂ ಪುಕ್ಕಟೆಯಾಗಿ ಅನ್ನ ಹಾಕುತ್ತಾರೆ. ಅದಕ್ಕಾಗಿಯೇ ಇಂಥವರು ಅಲ್ಲಿಗೆ ಹೋಗುವುದು. ತಿಂದುಬಿಟ್ಟು ಮಾಡುವುದೇನು? ಜ್ಞಾನ, ಭಕ್ತಿ ವೈರಾಗ್ಯಗಳು ತಲೆ ಬೋಳಿಸಿಕೊಂಡು ಕ್ಷೇತ್ರ ಸುತ್ತಿದ ಮಾತ್ರಕ್ಕೆ ಬರುತ್ತವೆಯೇ? ಅವರ ಮನಸ್ಸುಗಳು ಇಂಗ್ಲೀಷಿನ ಒಂದು ಗಾದೆಯಲ್ಲಿ ಹೇಳಿರುವ ಹಾಗೆ "ಸೋಮಾರಿಗಳ ಮನಸ್ಸು ಪಾಪದ ಕಾರ್ಖಾನೆ" ಆಗಿರುತ್ತವೆ. ಅವರೆಲ್ಲ ಬರಿಯ ಪೊಳ್ಳು ಹರಟೆಗಳಲ್ಲಿ ಕಾಲಕಳೆಯುವುದು. ಆ ಸ್ಥಳಗಳನ್ನೆಲ್ಲ ಸುತ್ತಿ ವಿಚಾರ ಮಾಡಿದ ಹೊರತು ಈ ವಿಷಯಗಳು ಪಟ್ಟಣಗಳಲ್ಲಿರುವ ಸಮಾಜ ಸುಧಾರಕರಿಗೆ ತಿಳಿಯುವುದೇ? ಸುಧಾರಕರೆನಿಸಿಕೊಳ್ಳುವವರು ನಿಜವಾಗಿಯೂ ಆ ಪ್ರದೇಶಗಳಿಗೆ ಹೋಗಿ ಅಲ್ಲಿಯ ವಿಧವೆಯರಿಗಾಗಿ ಆಶ್ರಮಗಳನ್ನು ಮಾಡಿ ಅವರಿಗೆ ಜ್ಞಾನೋದಯ ಮಾಡಿಸಿ ಪುಣ್ಯ ಕಟ್ಟಿಕೊಳ್ಳಬೇಕು. ದಕ್ಷಿಣ ಆಫ್ರಿಕಾದಲ್ಲಿನ ಭಾರತೀಯರ ಅಭ್ಯುದಯಕ್ಕಾಗಿ ಮಹಾತ್ಮಾ ಗಾಂಧಿ, ದೀನಬಂಧು ಆಂಡ್ರೂಸ್ ಮತ್ತು ರೈ|| ಆ|| ಶಾಸ್ತ್ರಿಗಳು ಶ್ರಮಿಸಿದಂತೆ ಈ ಕ್ಷೇತ್ರಗಳಲ್ಲಿನ ವಿಧವೆಯರನ್ನು ಅಜ್ಞಾನದಿಂದ ಪಾರುಮಾಡಲು ಮಹಾತ್ಮರಾರಾದರೂ ಕಂಕಣ ತೊಡಬಾರದೇ ಎಂದು ಪಾರ್ವತೀಬಾಯಿಯು ಬಹಳ ತವಕಿಸುತ್ತಾಳೆ. ಬರಿಯ ಸಮ್ಮೇಳನಗಳನ್ನು ಸೇರಿಸುವುದರಿಂದಲೂ ಠರಾವುಗಳನ್ನು ಬರೆದಿಡುವುದರಿಂದಲೂ ಸಮಾಜ ಸುಧಾರಣೆಯಾಗಲಾರದು.

# ೧೦. ವೈಧವ್ಯದ ಚಿಹ್ನೆಗಳ ಪರಿತ್ಯಾಗ

ತನ್ನ ಸ್ವಂತ ಅನುಭವದಿಂದಲೂ ಮತ್ತು ದೇಶಾಟನೆಯಿಂದಲೂ ಪಾರ್ವತೀಬಾಯಿಗೆ ವಿತಂತುಗಳ ಕಷ್ಟಾನುಭವಗಳನ್ನು ಕೂಲಂಕಷವಾಗಿ ಅರಿತುಕೊಳ್ಳಲು ದೊಡ್ಡ ಅವಕಾಶವಿದ್ದಿತು. ಹೋದಕಡೆಗಳಲ್ಲೆಲ್ಲ ಬರಿಯ ಹಣ ಶೇಖರಿಸುವ ಕೆಲಸ ಮಾತ್ರವಲ್ಲದೆ, ಅಲ್ಲಲ್ಲಿ ವಿಧವೆಯರಿಗೆ ಇರುತ್ತಿದ್ದ ದುಃಖಗಳನ್ನು ಪರಿಶೀಲಿಸುತ್ತಿದ್ದಳು. ವಿತಂತುಗಳನ್ನು ಬಲಾತ್ಕಾರದಿಂದ ವಿರೂಪಗೊಳಿಸಿ, ಅಪಮಾನಗೊಳಿಸಿ, ಆಮೇಲೆ ಹೀಯಾಳಿಸಿ, ಅವರನ್ನು ಎಲ್ಲಾವಿಧವಾದ ಸುಖಸಂತೋಷಗಳಿಂದ ದೂರಪಡಿಸುವ ಸಂಪ್ರದಾಯವು ಖಂಡಿತವಾಗಿಯೂ ನಿಲ್ಲಿಸಲ್ಪಡಬೇಕು, ಎಂಬ ನಿರ್ಧಾರಕ್ಕೆ ಆಕೆಯು ಬಂದಳು. ದೊಡ್ಡ ಪಟ್ಟಣಗಳಲ್ಲಿ ಕೆಲವು ಸುಧಾರಿತರಾದ ತಂದೆತಾಯಿಗಳು ತಮ್ಮ ಹೆಣ್ಣುಮಕ್ಕಳನ್ನು ಈ ಅನ್ಯಾಯವಾದ ಪದ್ಧತಿಯಿಂದ ತಪ್ಪಿಸಿದ್ದರೂ ಹಳ್ಳಿಗಳಲ್ಲಿ ಇನ್ನೂ ಈ ಪದ್ಧತಿಯು ಚೆನ್ನಾಗಿ ಬೇರೂರಿ ನಿಂತಿದೆ. ಈ ಪದ್ಧತಿಯನ್ನು ಹೇಗಾದರೂ ಕೊನೆಗಾಣಿಸಬೇಕೆಂದು ಸಂಕಲ್ಪಿಸಿದ್ದ ಪಾರ್ವತೀಬಾಯಿಯು ಈ ವಿಷಯವಾಗಿ ಕೆಲವು ಸಭೆಗಳಲ್ಲಿ ಮಾತನಾಡಿದಳು. ಅಲ್ಲದೆ ಆ ಸ್ಥಿತಿಯನ್ನನುಭವಿಸುತ್ತಿದ್ದ ಅನೇಕ ವಿತಂತುಗಳೊಡನೆಯೂ ಅವರ ಬಂಧುಮಿತ್ರರೊಡನೆಯೂ ಮಾತುಕತೆ ನಡೆಸಿದರು. "ಅಯ್ಯೋ! ಈ ದುಷ್ಟಪದ್ಧತಿಯನ್ನು ರೂಢಿಗೆ ತಂದ ದುರಾತ್ಮರಾರೋ?" ಎನ್ನುವವರ ಸಂಖ್ಯೆಯೇ ಹೆಚ್ಚು. ಇದು ವೇದಗಳಲ್ಲಾಗಲಿ ರಾಮಾಯಣ ಮಹಾಭಾರತಾದಿಗಳಲ್ಲಾಗಲಿ ಹೇಳಿಲ್ಲ. ಇದು ಯಾರಕಾಲದಲ್ಲಿ ಪದ್ಧತಿಗೆ ಬಂದಿತೆಂಬುದಕ್ಕೆ ತಕ್ಕ ಆಧಾರವಿಲ್ಲ. ಆದರೂ ಇದು ದೇಶದಲ್ಲೆಲ್ಲ ಆಚರಣೆಗೆ ಬಂದಿದೆ. ವಿರೂಪ ಹೊಂದಿದರೇನೆ ಧರ್ಮವೆಂದೂ, ಸಂಘಕ್ಕೆ ಅದರಿಂದಲೇ ಬಹಳ ಶ್ರೇಯಸ್ಸೆಂದೂ ಹಾಗೆ ಮಾಡದಿದ್ದರೆ ದೇವರ ಕೆಲಸಗಳಿಗೆ ಅಂಥವರಿಂದ ಪ್ರಯೋಜನವಾಗಲಾರದೆಂದೂ ಪ್ರತೀತಿ. ಮೋಕ್ಷಸಾಧಿಸಿ ತನ್ಮೂಲಕ ಜಗತ್ತಿಗೆ ಶಾಂತಿಯನ್ನು ದೊರಕಿಸಬೇಕೆಂದು ಬಹಳ ಅಪರೂಪವಾಗಿ ಒಳ್ಳೆಯ ಪಾಂಡಿತ್ಯ ಹೊಂದಿದ ಕೆಲವು ವಯಸ್ಕರಾದ ಗಂಡಸರು ಸ್ವೇಚ್ಛೆ

ಯಿಂದ ಸನ್ಯಾಸ ಸ್ವೀಕರಿಸಿ ಸರ್ವಸಂಗ ಪರಿತ್ಯಾಗ ಮಾಡುವುದುಂಟು. ಆ ಆಶ್ರಮದ ಪಾಲನೆಗಾಗಿ ಬಹಳ ಕಷ್ಟತರವಾದ ನಿಬಂಧನೆಗಳನ್ನು ಕೈಕೊಂಡು ಮನೆ ಮಠ ಊರುಗಳನ್ನು ತ್ಯಜಿಸಿ ಕಾಡಿನಲ್ಲಿಯೋ ಅಥವಾ ನಿರ್ಜನವಾದ ಪ್ರದೇಶದಲ್ಲಿಯೋ ಧ್ಯಾನತಪಸ್ಸುಗಳಲ್ಲಿ ಕಾಲಕಳೆಯುತ್ತಾರೆ. ಆ ಆಶ್ರಮದ ನಿಯಮಗಳಿಗೆ ಸ್ವಲ್ಪ ತಪ್ಪಿದರೂ ಅವನನ್ನು ದ್ರೋಹಿಯೆಂದೆಣಿಸಿ ಅಂತಹವನಿಂದ ಲೋಕಕ್ಕೆ ಹಾನಿಯೆಂದು ತಿಳಿದಿದ್ದಾರೆ. ಆ ಸನ್ಯಾಸಿಗಳಂತೆಯೇ ವಿಧವೆಯರು ಎಂಬ ಅಭಿಪ್ರಾಯದಿಂದ ಹೀಗೆ ವಿಧವೆಯರಿಗೆ ವಿರೂಪಮಾಡಿಸುವ ಉದ್ದಿಶ್ಯವಿರಬಹುದೇನೊ? ಆದರೆ ವಿಧವೆಯ ಗೋಳನ್ನು ಪೂಜ್ಯವಾದ ತುರೀಯಾಶ್ರಮಕ್ಕೆ ಸಮವೆನ್ನುವುದು ಆರ್ಯ ಸಂಸ್ಕೃತಿಗೇ ಕಳಂಕ ತರುವಂಥ ಮಾತು. ಒಂದುಸಾವಿರದಲ್ಲಿ ನಾಲ್ಕು ವಿಧವೆಯರೂ ಕೂಡ ಅಂಥ ಆಶ್ರಮಕ್ಕೆ ಅರ್ಹರಾಗುವ ಸಂಭವವಿಲ್ಲ. ಇವರು ಸ್ವೇಚ್ಛೆಯಿಂದ ಎಲ್ಲವನ್ನೂ ತ್ಯಜಿಸಿದವರಲ್ಲ. ಇವರ ವಿರೂಪಕರಣಕ್ಕೆ ಯಾವ ಮಂತ್ರತಂತ್ರಗಳೂ ಇಲ್ಲ. ಅಲ್ಲದೆ ಇವರು ಸಕೇಶಿಗಳಾಗಿರಲಿ ವಿಕೇಶಿಗಳಾಗಿರಲಿ ಸುಖವಾಗಿ ಸಂಸಾರ ಮಾಡಿಕೊಂಡಿರುವ ದಂಪತಿಗಳ ಮಧ್ಯದಲ್ಲಿ ನೆಂಟರ ನೆರೆಯಲ್ಲಿ ವಾಸ ಮಾಡಬೇಕಾಗಿರುವುದು. ಈ ಸನ್ನಿವೇಶಗಳಲ್ಲಿದ್ದುಕೊಂಡು ಅವರಿಗೆ ಪ್ರಾಪಂಚಿಕ ವಿಷಯಗಳನ್ನು ಮರೆಯಲು ಸಾಧ್ಯವೇ? ಇದರಿಂದ ಅವರು ಐಹಿಕಸುಖ ಮತ್ತು ಪಾರಮಾರ್ಥಿಕ ಸಿದ್ಧಿಗಳೆರಡರ ದೆಸೆಯಿಂದಲೂ ವಂಚಿತರೇ' ಎಂದು ಪಾರ್ವತೀಬಾಯಿ ಅಭಿಪ್ರಾಯಪಟ್ಟಿದ್ದಾಳೆ.

ದಯವಿಟ್ಟು ವಿತಂತುಗಳಿಗೆ ವಿರೂಪ ಮಾಡಿಸಬೇಡಿರಿ. ಅವರ ಸ್ವಂತ ತಲೆಯ ಹಕ್ಕನ್ನು ನೀವು ಕಸಿದುಕೊಳ್ಳಬೇಡಿರಿ. ಅವರಾಗಿ ಇಷ್ಟದಿಂದ ಬೌದ್ಧ ಭಿಕ್ಷುಣಿಯರಂತೆ ವಿರೂಪಮಾಡಿಸಿಕೊಂಡರೆ ಅದಕ್ಕೆ ಯಾರ ಅಡ್ಡಿಯೂ ಇಲ್ಲ. ಅಜ್ಞಾನದಿಂದಲೋ ಬಲಾತ್ಕಾರದಿಂದಲೋ ವಿರೂಪಗೊಂಡ ವಿಧವೆಯರು ತಮಗೆ ಬುದ್ಧಿ ಬಂದ ಮೇಲೆ ಪ್ರತಿಪಕ್ಷವೂ ಹಜಾಮನಿಗೆ ತಲೆಯನ್ನೊಪ್ಪಿಸುವುದನ್ನು ತಪ್ಪಿಸಿ ವೈಧವಕ್ಕೆ ಮೊದಲು ಇದ್ದ ಮನುಷ್ಯರೀತಿಯನ್ನೇ ಅನುಸರಿಸಲಿ. ಒಂದು ವೇಳೆ ವಿರೂಪ ಮಾಡಿಸಲೇಬೇಕು ಎಂಬುವುದಾದರೆ ನಾಯಿಂದರ ಕೈಗೆ ಅವರ ತಲೆಗಳ

ನ್ನೊಪ್ಪಿಸುವುದನ್ನಾದರೂ ತಪ್ಪಿಸಿ ಆ ಕೆಲಸವನ್ನು ಅವರವರಿಗೆ ಸಂಬಂಧ ಪಟ್ಟ ಅಣ್ಣತಮ್ಮಂದಿರು, ಮಕ್ಕಳು ಮುಂತಾದವರಿಂದಲಾದರೂ ಮಾಡಿಸಿರಿ" ಎಂದು ಪಾರ್ವತೀಬಾಯಿ ಹೇಳುತ್ತಿದ್ದಳು. ವಿಧವಾಶ್ರಮ ಕಾರ್ಯನಿರ್ವಾಹದಲ್ಲಿ ತೊಡಗಿದ್ದಾಗ ಈಕೆಯು ವಿರೂಪಕರಣವನ್ನು ನಿಲ್ಲಿಸುವುದಕ್ಕೆ ಸಾವಿರಾರು ಪ್ರಯತ್ನಗಳನ್ನು ಮಾಡಿದಳು.

ವಿಧವೆಯರ ಮುಂಡನದ ಕಷ್ಟನಿಷ್ಠುರಗಳು ವಿಧವೆಯರಿಗೇ ಗೊತ್ತು—ಆ ಕಷ್ಟನಿಷ್ಠುರಗಳನ್ನು ಎಲ್ಲರೂ ಪರಿಶೀಲಿಸಿ, ಸ್ವತಂತ್ರವಾಗಿ ಆಲೋಚಿಸಿ ಆ ತಪ್ಪು ಪದ್ಧತಿಯನ್ನು ನಿಲ್ಲಿಸುವುದಕ್ಕೆ ತಕ್ಕ ಪ್ರಯತ್ನ ಮಾಡಬೇಕೆಂದು ಪಾರ್ವತೀಬಾಯಿಯು ಕೇಳಿಕೊಂಡಿದ್ದಾಳೆ. ಕ್ಷೌರಿಕರು ಬಾಲವಿಧವೆಯರಿಗೆ ಸಿಕ್ಕುವಷ್ಟು ಸುಲಭವಾಗಿ ವೃದ್ಧವಿಧವೆಯರಿಗೆ ಬೊಂಬಾಯಿಯಂಥ ದೊಡ್ಡ ನಗರಗಳಲ್ಲಿಯೂ ಸಿಕ್ಕುವುದಿಲ್ಲವಂತೆ. "ನಿಮಗೆ ಕ್ಷೌರಮಾಡಿದರೆ ನನಗೆ ಆ ದಿವಸ ಕಾಸು ಹುಟ್ಟುವುದಿಲ್ಲ" ಎಂದು ಹಳ್ಳಿಗಳಲ್ಲಿ ವೃದ್ಧ ವಿಧವೆಯರಿಗೆ ಬಹಳ ತೊಂದರೆ ಕೊಡುತ್ತಾರಂತೆ. ತಲೆ ಸ್ವಲ್ಪ ಬೆಳೆಯಿತೆಂದರೆ ಸರಿ, ಪಾಪ, ಆ ವಿಧವೆಯರ ಗೋಳು ಹೇಳಿ ತೀರದು. "ಇದೇನಜ್ಜಿ! ಜಡೇ ಹಾಕ್ಕೋಬೇಕೂಂತ ಆಸೆಯೋ? ತಲೆ ಬೆಳೆಸಿಕೊಂತೀರಾ?" ಎಂದು ಕೇಳುವ ನೆರೆಹೊರೆಯವರ ನಿಷ್ಠುರ ಮಾತುಗಳಿಗೂ ಗುರಿಯಾಗಬೇಕು. ಈ ಪದ್ಧತಿಯನ್ನು ಪೂರ್ತಿಯಾಗಿ ತಪ್ಪಿಸಬೇಕಾದರೆ ಕ್ಷೌರಿಕರೆಲ್ಲರು ಒಗ್ಗಟ್ಟಾಗಿ "ಇನ್ನು ಮೇಲೆ ನಾವು ವಿಧವೆಯರಿಗೆ ಕ್ಷೌರ ಮಾಡಬಾರದು" ಎಂದು ಸಂಕಲ್ಪ ಮಾಡಬೇಕು; ಅಥವಾ ವಿಧವೆಯರು ತಮ್ಮ ತಲೆಯ ವಿಷಯದಲ್ಲಿ ತಮಗಿರುವ ಹಕ್ಕನ್ನು ಕಾಪಾಡಿಕೊಳ್ಳಬೇಕು. ಈ ಎರಡರ ಹೊರತು ಬೇರೆ ದಾರಿಯಿಲ್ಲ ಎಂದು ಪಾರ್ವತೀಬಾಯಿಯು ಸಾರಿಸಾರಿ ಹೇಳುತ್ತಿದ್ದಳು. ಒಂದು ಸಲ ಈಕೆಯು ನಾಯಿಂದರ ಮಹಾಸಭೆಯೊಂದನ್ನು ಸೇರಿಸಿ ಅಲ್ಲಿ ಅವರು ಇನ್ನು ಮೇಲೆ ವಿಧವೆಯರಿಗೆ ಕ್ಷೌರಮಾಡಕೂಡದೆಂಬ ಒಂದು ಠರಾವನ್ನು ಪಾಸು ಮಾಡಿದ್ದರಂತೆ. ಅದರಂತೆ ಎಷ್ಟು ಮಂದಿ ನಡೆದುಕೊಳ್ಳುತ್ತಿರುವರೋ!

'ಆಡುವುದನ್ನು ಮಾಡಿತೋರಿಸು' ಎಂಬಂತೆ ಯಾವ ಕೆಲಸವನ್ನೇ ಆಗಲಿ ಬರಿಯ ಮಾತಿನಿಂದ ಹೇಳುವ ಬದಲು ಆ ಕೆಲಸವನ್ನು ಮಾಡಿ

ತೋರಿಸುವುದರಿಂದ ಒಳ್ಳೆಯ ಪರಿಣಾಮವಾಗುವುದು. ಹಾಗೆಯೇ ಪಾರ್ವತೀಬಾಯಿಯು ಗಂಗೂಬಾಯಿಯ ಇಸವಿಯಿಂದ ಜನರ ಮಾತುಗಳಿಗೆ ಲಕ್ಷ್ಯಕೊಡದೆ ತನ್ನ ತಲೆಯನ್ನು ಬೆಳೆಯಿಸಿಕೊಂಡು ಸಾಂಪ್ರದಾಯಿಕ ವಾದ ವಿಧವಾ ವೇಷವನ್ನು ಬದಲಾಯಿಸಿಕೊಂಡಳು.

ಈಕೆಯು ಈ ಸಾಹಸಕೆಲಸದಿಂದ ಅನೇಕರ ಟೀಕೆಗಳಿಗೂ ನಿಷ್ಠುರ ಗಳಿಗೂ ಒಳಗಾಗಬೇಕಾಯಿತು. "ಇಪ್ಪತ್ತು ವರ್ಷಗಳಿಂದ ಹಾಗಿದ್ದವ ಳಿಗೆ ಈಗ ಏನು ಬಂತು ಕೇಡು" ಎಂದು ಕೆಲವರು; "ಅವಳು ಏನೋ ಉದ್ದಿಶ್ಯದಿಂದಲೇ ಹೀಗೆ ಮಾಡಿರಬೇಕು, ಇಷ್ಟು ದಿವಸವೂ ಹಾಗೆಯೇ ಎಷ್ಟೋ ಕೆಲಸ ಮಾಡಿರಲಿಲ್ಲವೇ? ಈಗ ಯಾಕೆ ವೇಷ ಬದಲಾಯಿ ಸಿದಳು! ಏನೋ ದುರುದ್ದೇಶವಿರಬಹುದು ನಿಮಗೆ ಗೊತ್ತೇ?" ಎಂದು ಕೆಲವರು ಪ್ರೊ|| ಕರ್ವೆಯವರನ್ನೇ ಪ್ರಶ್ನಿಸುತ್ತಿದ್ದರು. "ಅಂಥ ದುರುದ್ದೇಶ ವೇನೂ ಇರಲಾರದು, ಒಂದು ವೇಳೆ ಹಾಗೇನಾದರೂ ಇದ್ದರೆ ಅದು ಬಯಲಿಗೆ ಬಂದೇ ಬರುವುದು" ಎಂದು ಪ್ರೊ|| ಕರ್ವೆಯವರು ಸಮಾಧಾನ ಹೇಳುತ್ತಿದ್ದರಂತೆ.

ಪಾರ್ವತೀಬಾಯಿಯು ವಿಧವಾಶ್ರಮವನ್ನು ಸೇರಿದ ಕೂಡಲೇ ತನ್ನ ಕೂದಲನ್ನೇಕೆ ಬೆಳೆಸಬಾರದಾಗಿತ್ತು ಎಂದು ಕೆಲವರು ಕೇಳುತ್ತಿ ದ್ದರು. ಅದಕ್ಕೆ ಆಕೆಯು ಎರಡು ಕಾರಣಗಳನ್ನು ಹೇಳುತ್ತಾಳೆ. ಆಕೆಯು ಆಶ್ರಮಕ್ಕೆ ಸೇರಿದ ಕೂಡಲೇ ತನ್ನ ವೇಷವನ್ನು ಬದಲಾಯಿಸಿದ್ದರೆ ಆಕೆಯ ಮೇಲೂ ಆಶ್ರಮದ ಮೇಲೂ ಜನರಿಗೆ ಸಂಶಯಬಂದು ಆಶ್ರ ಮದ ಕಾರ್ಯಕ್ಕೆ ವಿಘ್ನ ಬರುತ್ತಿತ್ತು. ಅಲ್ಲದೆ ತನ್ನ ಮಗನು ಇನ್ನೂ ಚಿಕ್ಕವನಾಗಿದ್ದಾಗಲೇ ವಿರೂಪ ಹೊಂದಿದ್ದ ತಾಯಿಯು ವೇಷ ಬದಲಾ ಯಿಸಿದುದನ್ನು ಕಂಡರೆ ಅವನ ಎಳೆಯ ಮನಸ್ಸಿನಲ್ಲಿ ಜನರು ಆಡಿ ಕೊಳ್ಳುವ ಅಧಿಕ್ಷೇಪದ ಮಾತುಗಳು ನಾಟಿ ಆಕೆಯು ಏನೋ ಮಾಡ ಬಾರದ ಕೆಲಸವನ್ನು ಮಾಡಿದಳು ಎಂಬ ದುರಭಿಪ್ರಾಯವು ಬಂದು ಕೆಟ್ಟ ಪರಿಣಾಮವಾಗಬಹುದು. ಆದುದರಿಂದ ಅವನಿಗೆ ಸರಿಯಾದ ಬುದ್ಧಿ ಬರುವವರೆಗೂ ತನ್ನ ವೇಷದಲ್ಲಿ ಬದಲಾವಣೆ ಮಾಡಲು ಪಾರ್ವತೀ ಬಾಯಿಯು ಹಿಂಜರಿಯುತ್ತಿದ್ದಳು.

(ಪಾರ್ವತೀಬಾಯಿಯು ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ತನ್ನ ಈ ಅಭಿಪ್ರಾಯಗಳನ್ನು ಹೊಂದಿದುದು ೧೯೦೮-೯ರಲ್ಲಿ. ಅಲ್ಲಿಂದ ಈಚೆಗೆ ನಮ್ಮ ಹಿಂದೂ ಸಮಾಜದಲ್ಲಿ ವಿತಂತುಗಳ ವಿರೂಪಕರಣದ ವಿಷಯದಲ್ಲಿ ಬಹಳ ಸುಧಾರಣೆಯು ನಡೆದಿದೆಯಾದರೂ ಈ ಪದ್ಧತಿಯು ಇನ್ನೂ ಸಮಾಜದಿಂದ ತೊಡೆದು ಹೋಗಿಲ್ಲ. ಈ ಬಗ್ಗೆ ಒಂದು ಶಾಸನವನ್ನಾದರೂ ಮಾಡಿಸಬೇಕೆಂದು ಕೆಲವರು ಹೆಣಗಾಡಿದರು. ಆದರೆ ಈ ಪದ್ಧತಿಯು ಸಂಪೂರ್ಣವಾಗಿ ನಿಂತು ಹೋಗಬೇಕಾದರೆ ವಿಧವೆಯರೇ ಇದನ್ನು ವಿರೋಧಿಸಿದರೆ ಸಾಧ್ಯವೇ ಹೊರತು ಶಾಸನದಿಂದ ಪ್ರಯೋಜನವಾಗಲಾರದು.)

# ೧೧. ಮಗನ ಮದುವೆ

ಪಾರ್ವತೀಬಾಯಿಯು ಪುಣೆಗೆ ಬಂದು ನೆಲೆಸಿದುದು ತನ್ನ ಮಗನ ವಿದ್ಯಾಭ್ಯಾಸಕ್ಕಾಗಿ. ಆದರೆ ಈಕೆಯು ವಿಧವಾಶ್ರಮಕ್ಕೆ ಆಜೀವವೂ ದುಡಿಯುವುದಾಗಿ ಸಂಕಲ್ಪಿಸಿದ ಮೇಲೆ ಅದರ ಅಂಗವಾಗಿ ತನ್ನ ವಿದ್ಯಾ ವ್ಯಾಸಂಗಕ್ಕೆ ಹೆಚ್ಚು ಗಮನ ಕೊಡಬೇಕಾಯಿತು. ಅದರಿಂದ ತನ್ನ ಮಗನನ್ನು ಓದಿಸಿ ಮುಂದಕ್ಕೆ ತರುವ ಭಾರವನ್ನು ಬಾಯು ಮತ್ತು ಪ್ರೊ|| ಕರ್ವೆಯವರಿಗೇ ವಹಿಸಿಬಿಟ್ಟಳು. ಈಕೆಗೆ ಸ್ವಂತ ಹಣವಿಲ್ಲದೇ ಇದ್ದುದೂ ಇದಕ್ಕೆ ಇನ್ನೊಂದು ಕಾರಣವಾಯಿತು. ವ್ಯಾಸಂಗ ಮುಗಿದು ವಿಧವಾಶ್ರಮದಲ್ಲಿ ಕೆಲಸಕ್ಕೆ ಸೇರಿದ ಮೇಲೆ ಅಲ್ಲಿ ಪಾರ್ವತೀಬಾಯಿಯು ಊಟ ಕಳೆದು ತಿಂಗಳಿಗೆ ಎರಡೂವರೆ ರೂಪಾಯಿಗಳಲ್ಲದೆ ಮತ್ತೇನೂ ತೆಗೆದುಕೊಳ್ಳುತ್ತಿರಲಿಲ್ಲ. ಕೆಲವು ವರ್ಷಗಳ ಮೇಲೆ ಈಕೆಯ ಮಗನ ವ್ಯಾಸಂಗಕ್ಕೆಂದು ಆಶ್ರಮದ ನಿಧಿಯಿಂದ ತಿಂಗಳಿಗೆ ಎಂಟು ರೂಪಾಯಿಗಳನ್ನು ಕೊಡುತ್ತಿದ್ದರು. ಒಳ್ಳೆಯ ಸಹವಾಸದಲ್ಲಿದ್ದುದರಿಂದ ಹುಡುಗನು ಬಹು ಬುದ್ಧಿವಂತನಾಗಿ ಓದುತ್ತಿದ್ದನು. ಇದನ್ನು ಕಂಡು ಪಾರ್ವತೀ ಬಾಯಿಯ ತಂಗಿ ಶ್ರೀ|| ಕಾಶೀಬಾಯಿ ಮತ್ತು ಆಕೆಯ ಗಂಡ ಶ್ರೀ|| ಭಿಡೆಯವರು ಹುಡುಗನ ವಿಶ್ವವಿದ್ಯಾನಿಲಯದ ವ್ಯಾಸಂಗಕ್ಕಾಗಿ ತಾವು ಸಹಾಯ ಮಾಡಿದರು. ಹೀಗೆ ಪಾರ್ವತೀಬಾಯಿಯ ಮಗನು ಎಂ.ಎ. ಪರೀಕ್ಷೆ ಮಾಡಿದನು. ಇನ್ನೂ ಅವನು ಓದುತ್ತಿದ್ದಾಗಲೇ ತಾನೂ ತನ್ನ ತಾಯಿಯಂತೆ ವಿಧವಾಶ್ರಮದ ಆಜೀವಸೇವಕನಾಗಿ ಸೇರಿ ಯಾವಜ್ಜೀವವೂ ಅದರ ಏಳಿಗೆಗಾಗಿ ದುಡಿಯಬೇಕೆಂದು ನಿಶ್ಚಯಿಸಿಕೊಂಡಿದ್ದನು. ಪಾರ್ವತೀಬಾಯಿಗೆ ತನ್ನ ಮಗನು ೨೦ನೆಯ ವಯಸ್ಸಿನಲ್ಲೇ ಇಂಥ ಸಂಕಲ್ಪವನ್ನು ಮಾಡಿದ್ದ ಸಂಗತಿಯು ತಿಳಿದು, ಬಹಳ ಸಂತೋಷವಾಯಿತು.

ಮಗನಿಗೆ ಸರಿಯಾದ ಹೆಣ್ಣನ್ನು ಹುಡುಕಿ ಮದುವೆ ಮಾಡಬೇಕೆಂಬ ಯೋಚನೆ ಪಾರ್ವತೀಬಾಯಿಗೆ ಬಂದಿತು. ತಮ್ಮ ಮಕ್ಕಳ ಮದುವೆಯ ವಿಷಯದಲ್ಲಿ ಸಾಮಾನ್ಯವಾಗಿ ಅನೇಕ ತಂದೆ ತಾಯಿ

ಯರು ಸರಿಯಾಗಿ ಯೋಚನೆ ಮಾಡುವುದಿಲ್ಲ. ವರದಕ್ಷಿಣೆ ತಪ್ಪಿಸಿ ಕೊಳ್ಳುವುದು, ಅಥವಾ ಹೆಚ್ಚು ವರದಕ್ಷಿಣೆ, ಒಡವೆ ವಸ್ತುಗಳು ಸಿಕ್ಕಿದರೆ ಸರಿ ಎಂಬುವುಗಳಿಗೆ ಮಾತ್ರ ಗಮನ ಕೊಡುತ್ತಾರೆ. ಪಾರ್ವತೀ ಬಾಯಿಯು ಹಾಗಲ್ಲ. ಗಂಡ ಹೆಂಡಿರು ದಾಂಪತ್ಯ ಜೀವನದಲ್ಲಿ ಪರ ಸ್ಪರ ಹೊಂದಿಕೊಂಡು ಸುಖವಾಗಿ ಸಂಸಾರ ಜರುಗಿಸಿಕೊಂಡಿರಬೇಕಾ ದರೆ ಹುಡುಗಿಯರು ಚೆನ್ನಾಗಿ ಓದಿರಬೇಕು. ತಂದೆ ತಾಯಿಯರ ಗುಣಗಳೇ ಮಕ್ಕಳಿಗೂ ಬರುವುದರಿಂದ ಅವರ ತಂದೆ ತಾಯಿಯರ ನಡವಳಿಕೆಗಳು ಚೆನ್ನಾಗಿರಬೇಕು. ಮಕ್ಕಳನ್ನು ಅಕ್ಕರೆಯಿಂದ ಚೆನ್ನಾಗಿ ಬುದ್ಧಿ ಕಲಿಸಿ ಸಾಕಿದವರ ಮನೆಯ ಮಕ್ಕಳನ್ನೇ ಆರಿಸಬೇಕು. ಹೀಗೆ ಚೆನ್ನಾಗಿ ಯೋಚಿಸಿ ತನ್ನ ಮನಸ್ಸಿಗೆ ಒಪ್ಪುವಂಥಾ ಕನ್ಯೆಯು ಎಲ್ಲಿ ಸಿಕ್ಕುವಳೊ ಎಂದು ಪಾರ್ವತೀಬಾಯಿಯು ಯೋಚಿಸುತ್ತಿದ್ದಳು.

ಹಿಂದೆ ಗೋವಾದಲ್ಲಿದ್ದಾಗ ತಮ್ಮೊಂದಿಗೆ ವಾಸವಾಗಿದ್ದ ಶ್ರೀ|| ಬಾಲಾಜಿ ಭಾಸ್ಕರ ಜೋಷಿ ಮತ್ತು ಅವರ ಪತ್ನಿ ರಮಾಬಾಯಿಯವರು ಒಂದು ದಿವಸ, "ನಮಗೆ ಹೆಣ್ಣು ಮಗುವಾದರೆ, ನಿಮ್ಮ ನಾನನಿಗೆ ಕೊಟ್ಟು ಮದುವೆ ಮಾಡುತ್ತೇವೆ" ಎಂದು ಹೇಳಿದ್ದ ಮಾತು ಈಗ ಜ್ಞಾಪಕಕ್ಕೆ ಬಂದಿತು.

ಈ ವೇಳೆಗೆ ಜೋಷಿಯವರು ಹಾರ್ನೆ ಎಂಬ ಊರಿನಲ್ಲಿದ್ದರು. ತಮ್ಮ ಮಗಳಿಗೆ ಸರಿಯಾದ ವಿದ್ಯಾಭ್ಯಾಸ ಮಾಡಿಸಿ ಮದುವೆ ಮಾಡ ಬೇಕೆಂದಿದ್ದರೆಂದೂ, ತಮ್ಮ ಮಗಳನ್ನು ಸೇರಿಸಲು ಒಳ್ಳೆಯ ಶಾಲೆ ಯನ್ನು ಹುಡುಕುತ್ತಿದ್ದರೆಂದೂ ಪಾರ್ವತೀಬಾಯಿಗೆ ತಿಳಿಯಿತು. ಕೂಡಲೆ ಪಾರ್ವತೀಬಾಯಿಯು ಜೋಷಿಯವರಿಗೆ ಅವರ ಮಗಳನ್ನು ಹಿಂಗಣೆಯ ಶಾಲೆಯಲ್ಲಿ ಓದಿಸಿದರೆ ಚೆನ್ನಾಗಿರುತ್ತದೆಂದು ಬರೆದರು. ಜೋಷಿಯವರು ಬಹಳ ಸಂತೋಷದಿಂದ ಮಗಳನ್ನು ಹಿಂಗಣೆಗೆ ಓದು ವುದಕ್ಕೆ ಕಳುಹಿಸಿದರು. ಈ ಹುಡುಗಿಯು ಬಹಳ ಒಳ್ಳೆಯವಳು. ಜಂಭ ವೆಂಬುದೇ ಇಲ್ಲ. ಕೆಲಸದಲ್ಲಿ ಆಸಕ್ತಿ. ಎಲ್ಲಿದ್ದರೂ ಎಲ್ಲರಲ್ಲಿಯೂ ಹೊಂದಿಕೊಂಡು ತಾನೂ ಸಂತೋಷದಿಂದಿದ್ದು ಇತರರನ್ನೂ ಸಂತೋಷ ಗೊಳಿಸುತ್ತಿದ್ದಳು. ಈ ಹುಡುಗಿಯ ತಂದೆತಾಯಿಯರು ಪಾರ್ವತೀ

ಬಾಯಿಗೆ ಎಲ್ಲ ವಿಷಯಗಳಲ್ಲಿಯೂ ಒಪ್ಪಿಗೆಯಾಗಿದ್ದರು. ಈ ಹುಡುಗಿಯ ಎಲ್ಲ ಗುಣಗಳೂ ಪಾರ್ವತೀಬಾಯಿಗೆ ಬಹಳ ಒಪ್ಪಿದುವು. ಅಂತಹವಳನ್ನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳಬೇಕೆಂಬ ಆಶೆಯು ಆಕೆಗೆ ಬಹಳವಾಯಿತು.

ನಮ್ಮಲ್ಲಿ ಮಕ್ಕಳ ಮದುವೆಯನ್ನು ಸಾಮಾನ್ಯವಾಗಿ ಹಿರಿಯರು ಒಪ್ಪಿದರೆ ಸರಿ ವಧೂವರರಾಗುವವರ ಒಪ್ಪಿಗೆಯೇನು ಅಷ್ಟು ಮುಖ್ಯವಲ್ಲ, ಎಂಬ ಪದ್ಧತಿಯಿದೆ. ಪಾಶ್ಚಾತ್ಯರಲ್ಲಿಯಾದರೋ ವಧೂವರರು ಪರಸ್ಪರ ಪ್ರೀತಿಸುವುದೇ ಮುಖ್ಯ. ಆ ಮದುವೆಗಳ ವಿಷಯದಲ್ಲಿ ತಂದೆತಾಯಿಯರ ಅಭಿಪ್ರಾಯವನ್ನು ಲಕ್ಷ್ಯಮಾಡುವುದಿಲ್ಲ. ಈ ಎರಡು ವಿಧಗಳಿಂದಲೂ ಅಷ್ಟು ಒಳ್ಳೆಯ ಪರಿಣಾಮವಾಗಿಲ್ಲ. ತರುಣತರುಣಿಯರು ರೂಪಕ್ಕೆ ಮನಸೋಲುವರೇ ಹೊರತು ಕುಲಗೋತ್ರಗಳು, ವಂಶದ ಯಶಸ್ಸು ಮತ್ತು ಉತ್ತಮ ಗುಣಗಳಿಗೆ ಅಷ್ಟಾಗಿ ಗಮನಕೊಡಲಾರರು. ಅನುಭವ ಸಾಲದವರಾದುದರಿಂದ ಕೇವಲ ಅವರ ಇಷ್ಟಕ್ಕೇ ಬಿಟ್ಟು ಬಿಟ್ಟರೆ ಅಂಥ ಮದುವೆಯಿಂದ ಅಷ್ಟಾಗಿ ಸುಖವಾಗಲಾರದು. ನಮ್ಮವರು ಎಲ್ಲದರಲ್ಲಿಯೂ ಪಾಶ್ಚಾತ್ಯರನ್ನು ಅನುಕರಿಸುವುದೇ ಹೆಚ್ಚು. ಮದುವೆಯ ವಿಷಯದಲ್ಲಿ ಮಾತ್ರ ಈ ಮೇಲಿನ ಎರಡು ಪದ್ಧತಿಗಳಿಂದಲೂ ಉತ್ತಮವಾದುದನ್ನು ಮಾತ್ರ ಆರಿಸಿಕೊಳ್ಳುವುದು ಮೇಲು. ತಂದೆ ತಾಯಿಯರು ಮತ್ತು ಹುಡುಗ ಹುಡುಗಿಯರು ಕೂಡ ಒಪ್ಪಿ ಜರುಗಿದ ಮದುವೆಗಳು ಬಹಳ ಸುಖಕರವಾಗಿರುತ್ತವೆಯೆಂದು ಪಾರ್ವತೀಬಾಯಿಯ ನಂಬಿಕೆ.

ಜೋಷಿಯವರ ಮಗಳು ಇಂಗ್ಲೀಷು ಆರನೆಯ ತರಗತಿಯಲ್ಲಿದ್ದಳು. ಅವಳು ಎಲ್ಲ ವಿಷಯಗಳಲ್ಲಿಯೂ ತನಗೆ ಒಪ್ಪಿಗೆಯಾಗಿದ್ದುದರಿಂದ ಆ ಹುಡುಗಿಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಲು ತನಗೆ ಇಷ್ಟವಾಗಿದೆಯೆಂದು ಪಾರ್ವತೀಬಾಯಿಯು ಮಗನ ಸಂಗಡ ಪ್ರಸ್ತಾಪಿಸಿದಳು. ಈಗಾಗಲೆ ಇವಳಿಗಿಂತಲೂ ರೂಪದಲ್ಲಿ ಚೆನ್ನಾಗಿದ್ದ ಹುಡುಗಿಯರನ್ನು ನಾನನಿಗೆ ಕೊಡಲು ಅನೇಕರು ಬಂದು ಕೇಳುತ್ತಿದ್ದರು. ಆದ್ದರಿಂದ ನಾನನು ಮೊದಲು ಈ ಮಾತಿಗೆ ಒಪ್ಪಲಿಲ್ಲ. ಆದರೂ ಆಕೆಯು ಅಷ್ಟಕ್ಕೇ

ಬಿಡದೆ ತನ್ನ ಮಗನ ಮನಸ್ಸಿಗೆ ಸರಿಯಾಗಿ ತಿಳಿಯುವಂತೆ ಆಗಾಗ್ಗೆ ಜೋಷಿಯವರ ಮಗಳ ಒಳ್ಳೆಯ ನಡತೆಗಳನ್ನು ಹೇಳುತ್ತಿದ್ದಳು.

ಇದುವರೆಗೂ ಪ್ರೊ|| ಕರ್ವೆಯವರ ಸಹವಾಸದಲ್ಲಿ ಬೆಳೆದವನಾದ್ದರಿಂದ ಹುಡುಗನೂ ಅವರಂತೆಯೇ ಸರಳವಾಗಿ ಜೀವಿಸಬೇಕೆಂದೂ ಆಜೀವವೂ ತನ್ನ ತಾಯಿಯಂತೆ ತಾನೂ ವಿಧವಾಶ್ರಮಕ್ಕಾಗಿ ದುಡಿಯಬೇಕೆಂದೂ ನಿರ್ಧರಿಸಿಕೊಂಡಿದ್ದನು. ಇವನ ಈ ಬಗೆಯ ಉದ್ದೇಶಗಳು ನೆರವೇರಲು ಜೋಷಿಯವರ ಮಗಳೇ ಅವನಿಗೆ ತಕ್ಕವಳೆಂದು ಪಾರ್ವತೀಬಾಯಿಯು ನಿರ್ಧರಿಸಿದ್ದಳು. ಪ್ರಸ್ತಾಪ ಬಂದಾಗಲೆಲ್ಲ ಪಾರ್ವತೀಬಾಯಿಯು ಆ ಹುಡುಗಿಯ ಗುಣಗಳನ್ನು ಹೊಗಳುತ್ತಿದ್ದಳು. ಕಡೆಗೆ ಒಂದು ದಿವಸ ಮಗನು ಜೋಷಿಯವರ ಮಗಳನ್ನು ಮದುವೆಯಾಗಲು ಒಪ್ಪಿದುದನ್ನು ಕೇಳಿ ಬಹಳ ಸಂತೋಷಪಟ್ಟಳು. ಕೂಡಲೇ ಶುಭಲಗ್ನದಲ್ಲಿ ಮದುವೆಯು ನೆರವೇರಿಸಲಾಯಿತು. ಆಗ ಗೋವಾದಲ್ಲಿ ತಮಾಷೆಗಾಗಿ ಆಡಿದ್ದ ಮಾತು ನಿಜವಾಯಿತು. ಮದುವೆಯ ವೇಳೆಗೆ ಮಗನಿಗೆ ೨೭ ವರ್ಷ, ಸೊಸೆಗೆ ೨೧ ವರ್ಷ. ಈ ಮದುವೆಯು ಜರುಗಿದುದು ೧೯೧೫ನೆಯ ಇಸವಿಯಲ್ಲಿ. ಅವರ ದಾಂಪತ್ಯವನ್ನು ಈಗ ಯಾರು ನೋಡಿದರೂ ಪಾರ್ವತೀಬಾಯಿಯ ಯೋಚನೆಯು ಸರಿಯಾದುದೆಂದು ಒಪ್ಪುತ್ತಾರೆ.

ಮಗನ ಮದುವೆಯಾದಮೇಲೆ ಪಾರ್ವತೀಬಾಯಿಗೆ ಒಂದು ಭಾರ ಇಳಿಸಿದಂತಾಯಿತು. ತಾನು ಅವನಿಗಾಗಿ ಮಾಡಬೇಕಾದುದು ಮತ್ತೇನೂ ಇಲ್ಲ. ಈಗ ಆಶ್ರಮಕ್ಕೆ ಇನ್ನೂ ಹೆಚ್ಚು ಕಾಲವನ್ನು ವಿನಿಯೋಗಿಸಿ ದುಡಿಯಲು ಅವಕಾಶ ಸಿಕ್ಕಿದಂತಾಯಿತು.

## ೧೨. ಇಂಗ್ಲಿಷ್ ಕಲಿಯುವ ಸಂಭ್ರಮ

ಪಾರ್ವತೀಬಾಯಿಗೆ ಇಂಗ್ಲಿಷ್ ಕಲಿಯಬೇಕೆಂದು ಬಹಳ ಆಸೆಯಿದ್ದಿತು. ಆಕೆಯು ಮರಾಠಿ ವ್ಯಾಸಂಗವನ್ನು ಮುಗಿಸಿ ವಿಧವಾಶ್ರಮದ ಕೆಲಸಕ್ಕೆ ಸೇರಿದ ದಿವಸವೇ ಒಂದು ಇಂಗ್ಲಿಷ್ ಬಾಲಬೋಧೆಯನ್ನು ಕೊಂಡುಕೊಂಡಿದ್ದಳು. ದಿನವಹಿ ಕೆಲಸ ಆದ ಮೇಲೆ ಸಿಕ್ಕುವ ವಿರಾಮ ಕಾಲದಲ್ಲಿ ಇಂಗ್ಲಿಷ್ ವ್ಯಾಸಂಗ ಮಾಡಬಹುದೆಂಬ ಅಭಿಪ್ರಾಯದಿಂದಲೇ ಆ ಪುಸ್ತಕವನ್ನು ಕೊಂಡುಕೊಂಡುದು. ಆದರೆ ಆಶ್ರಮದ ಎಲ್ಲ ಕೆಲಸಗಳೂ ಪಾರ್ವತೀಬಾಯಿಯ ಪಾಲಿಗೇ ಬಂದು ವಿರಾಮ ಸಿಕ್ಕುವುದೇ ಕಷ್ಟವಾಗಿದ್ದುದರಿಂದ ಇಂಗ್ಲಿಷ್ ಕಲಿಯುವಿಕೆಗೆ ಹೊತ್ತಿಲ್ಲವಾಯಿತು. ೧೯೦೪ ರಿಂದೀಚೆಗೆ ಹಣ ಶೇಖರಿಸುವ ಜವಾಬ್ದಾರಿ ಬೇರೆ ಬಂತು. ಆಕೆಯು ತಿಂಗಳೊಂದಕ್ಕೆ ಸುಮಾರು ೩೦೦/– ರೂಪಾಯಿಗಳನ್ನು ವಸೂಲ್ಮಾಡುತ್ತಿದ್ದಳು. ಆ ಕಾಲದಲ್ಲಿ ಆಹಾರ ಸಾಮಗ್ರಿಗಳು ಅಗ್ಗವಾಗಿದ್ದುದರಿಂದ ಮುನ್ನೂರು ರೂಪಾಯಿಗಳು ತಿಂಗಳಿಗೆ ಐವತ್ತು ಮಂದಿ ವಿತಂತುಗಳ ಪೋಷಣೆಗೆ ಸಾಕಾಗುತ್ತಿತ್ತು. ತನಗೆ ಸ್ವತಃ ಇಂಗ್ಲಿಷ್ ಕಲಿಯಲು ಅವಕಾಶ ಸಿಕ್ಕದಿದ್ದರೂ ಚಿಂತೆಯಿಲ್ಲ; ಓದುತ್ತಿರುವ ಐವತ್ತು ಮಂದಿ ವಿಧವೆಯರ ಪೋಷಣೆಗೆ ಆಗುವಷ್ಟು ಹಣವನ್ನು ಶೇಖರಿಸುತ್ತಿರುವೆನಲ್ಲ ಎಂಬುದೇ ಪಾರ್ವತೀಬಾಯಿಗೆ ಸಮಾಧಾನ.

ಪ್ರವಾಸಗಳಲ್ಲಿ ಇಂಗ್ಲಿಷ್ ತಿಳಿಯದುದರಿಂದ ಪಾರ್ವತೀಬಾಯಿಯು ತುಂಬಾ ತೊಂದರೆಪಡುತ್ತಿದ್ದಳು. ಮರಾಠಿ ತಿಳಿಯದ ಕಡೆ ಮಾತನಾಡುವುದೇ ಕಷ್ಟ. ಒಂದೊಂದು ಸಲ ರೈಲು ನಿಲ್ದಾಣಗಳ ಹೆಸರನ್ನು ಓದುವುದಕ್ಕೆ ತಿಳಿಯದೆ ಅನೇಕ ಊರುಗಳನ್ನು ತಟಾಯಿಸಿ ಹೊರಟು ಹೋಗುತ್ತಿದ್ದಳು. ಪಟ್ಟಣಗಳಲ್ಲಿ ದೊಡ್ಡ ಮನುಷ್ಯರ ಮನೆಗಳ ಗೇಟುಗಳಿಗೆ ಸಾಮಾನ್ಯವಾಗಿ ಇಂಗ್ಲಿಷಿನಲ್ಲಿ ಬರೆಯಿಸಿದ ಬೋರ್ಡುಗಳನ್ನು ಹಾಕಿರುತ್ತಾರೆ. ಅವುಗಳನ್ನು ಓದಿದ ಹೊರತು ಮನೆಯವರ ಹೆಸರು ತಿಳಿಯುವುದಿಲ್ಲ. ಅಷ್ಟನ್ನು ತಿಳಿದುಕೊಳ್ಳಲು ಆಕೆ ಮತ್ತೊಬ್ಬರ ಸಹಾಯವನ್ನು ಕೋರಬೇಕಾಗುತ್ತಿತ್ತು. ಹೀಗೆ ಇಂಗ್ಲಿಷ್ ತಿಳಿಯದುದ

ರಿಂದ ಆಕೆಯು ಅನೇಕ ತೊಂದರೆಗಳಿಗೊಳಗಾಗುತ್ತಿದ್ದಳು. ಆದ್ದರಿಂದ ಇಂಗ್ಲಿಷ್ ಕಲಿತರೆ ವಸೂಲಿ ಮತ್ತು ಆಶ್ರಮದ ಎಲ್ಲಾ ಕೆಲಸಗಳನ್ನು ಇನ್ನೂ ಚೆನ್ನಾಗಿ ಮಾಡಲು ಅನುಕೂಲವಾಗಬಹುದೆಂದು ಯೋಚಿಸಿ ಪಾರ್ವತೀಬಾಯಿಯು ಇಂಗ್ಲಿಷ್ ಕಲಿಯಲೇಬೇಕೆಂದು ಪ್ರತಿಜ್ಞೆ ಮಾಡಿದಳು. ಈಕೆಯ ಪ್ರತಿಜ್ಞೆಗೆ ಗುರುಗಳ ಅಪ್ಪಣೆಯೂ ದೊರೆಯಿತು. ಅಂತು ೧೯೧೨ರಲ್ಲಿ ಪಾರ್ವತೀಬಾಯಿಯು ಇಂಗ್ಲಿಷ್ ಕಲಿಯುವುದಕ್ಕಾಗಿ ಬೊಂಬಾಯಿಗೆ ಹೋದಳು. ಆದರೆ ಆಶ್ರಮದ ಆವಶ್ಯಕ ಕೆಲಸಗಳಿಗಾಗಿ ಕೆಲವು ದಿವಸಗಳಲ್ಲಿಯೇ ಈಕೆಯು ಹಿಂದಿರುಗಬೇಕಾಯಿತು. ಆದುದರಿಂದ ಕಲಿಯುವಿಕೆಯನ್ನು ಮುಂದು ಹಾಕಬೇಕಾಯಿತು.

೧೯೧೪ರ ವೇಳೆಗೆ ಡಾ|| ಖಾಂಡ್ವಾಲ ಎಂಬುವರು ಪಾರ್ವತೀಬಾಯಿಯನ್ನು ಬರಿಯ ಇಂಗ್ಲಿಷ್ ಭಾಷೆಯನ್ನೇ ಆಡುವ ಕಾನ್ವೆಂಟ್ ಸ್ಕೂಲಿನಲ್ಲಿ ಬಿಟ್ಟರೆ ಬೇಗ ಇಂಗ್ಲಿಷ್ ಕಲಿಯಲು ಸಹಾಯವಾಗಬಹುದು; ಅಂಥ ಸ್ಕೂಲೆಂದರೆ ಬಾಂದ್ರದಲ್ಲಿರುವ ಮಿಷನರಿ ಕಾನ್ವೆಂಟ್ ಸ್ಕೂಲೇ! ಅಲ್ಲಿಗೆ ಪಾರ್ವತೀಬಾಯಿಯನ್ನು ಕಳುಹಿಸುವುದಾದರೆ ತಮ್ಮ ಕೈಲಾದ ಸಹಾಯವನ್ನು ಒದಗಿಸುವುದಾಗಿ ಪ್ರೊ|| ಕರ್ವೆಯವರಿಗೆ ಕಾಗದ ಬರೆದರು. ಅವರ ಸಲಹೆಯನ್ನು ಮನ್ನಿಸಿ ಪ್ರೊ|| ಕರ್ವೆಯವರು ಪಾರ್ವತೀಬಾಯಿಯನ್ನು ಬಾಂದ್ರದ ಕಾನ್ವೆಂಟ್ ಸ್ಕೂಲಿಗೆ ಕಳುಹಿಸಲು ಒಪ್ಪಿದರು. ಆ ವೇಳೆಗೆ ವಿಧವಾಶ್ರಮದ ಸ್ಥಿತಿಯು ಉತ್ತಮಗೊಂಡಿದ್ದುದರಿಂದ ಪಾರ್ವತೀಬಾಯಿಯು ಕೆಲವು ಕಾಲ ಅಲ್ಲಿಲ್ಲದಿದ್ದರೂ ನಿಭಾಯಿಸುವಂತಿದ್ದಿತು. ಈ ಅನುಕೂಲತೆಗಳಿಂದ ಆಕೆಯು ಇಂಗ್ಲಿಷ್ ಕಲಿಯುವುದಕ್ಕಾಗಿ ಬಾಂದ್ರಕ್ಕೆ ಪ್ರಯಾಣಮಾಡಿದಳು.

ಬಾಂದ್ರದ ಬೋರ್ಡಿಂಗ್ ಸ್ಕೂಲಿನಲ್ಲಿ ಈಕೆಗೆ ಒಂದು ಬೇರೆ ಕೊಠಡಿಯನ್ನು ಕೊಟ್ಟರು. ಹತ್ತಿರದಲ್ಲಿದ್ದ ಬ್ರಾಹ್ಮಣರ ಖಾನಾವಳಿ (ಹೋಟೆಲ್) ಒಂದರಿಂದ ಊಟ ತರಿಸಿಕೊಂಡು ಈ ಕೊಠಡಿಯಲ್ಲಿ ಊಟ ಮಾಡಿಕೊಂಡು ಓದಿಕೊಂಡಿರಲು ಪಾರ್ವತೀಬಾಯಿಯು ನಿಶ್ಚಯಿಸಿದಳು. ಈ ವೇಳೆಗೆ ಆಕೆಗೆ ೪೩ ವರ್ಷ ವಯಸ್ಸಾಗಿತ್ತು. ಈಕೆಯು ವಯಸ್ಸಿನಲ್ಲಿ ಬಹಳ ದೊಡ್ಡವಳಾಗಿದ್ದುದರಿಂದ ಸ್ಕೂಲಿನ ಚಿಕ್ಕ ಮಕ್ಕಳ

ಜತೆಯಲ್ಲಿ ಸೇರಿಸಿ ಪಾಠಕಲಿಸಲು ಶಾಲಾಧಿಕಾರಿಗಳು ಹಿಂಜರಿದರು. ಅದರಿಂದ ಹಿಂದುವಾಗಿದ್ದು ಹೊಸದಾಗಿ ಕ್ರಿಸ್ತಮತಕ್ಕೆ ಸೇರಿದ್ದ ಒಬ್ಬ ಹುಡುಗಿಯ ಕೈಯಲ್ಲಿ ಪಾರ್ವತೀಬಾಯಿಗೆ ಮಧ್ಯಾಹ್ನ ಒಂದು ಗಂಟೆಯ ಹೊತ್ತು ಪಾಠ ಹೇಳಿಸುತ್ತಿದ್ದರು. ಹೀಗೆ ಕಲಿಯುವುದರಲ್ಲಿ ಪಾರ್ವತೀ ಬಾಯಿಗೆ ಏನೂ ಪ್ರಯೋಜನ ತೋರಲಿಲ್ಲ. ಬರಿಯ ಕಾರಾಗೃಹವಾಸ ದಂತೆ ಇದ್ದಿತು. ಕೆಲವು ದಿವಸಗಳ ಮೇಲೆ ಪ್ರೊ|| ಕರ್ವೆಯವರ ಪ್ರಯತ್ನ ದಿಂದ ಈಕೆಯು ಇತರ ಹುಡುಗಿಯರ ಸಂಗಡ ತರಗತಿಯಲ್ಲಿ ಕುಳಿತು ಕೊಳ್ಳುವದಕ್ಕೆ ಅನುಮತಿಕೊಟ್ಟರು. ಆದರೆ ಅಲ್ಲಿಯೂ ಈಕೆಯು ದೂರ ವಾಗಿ ಕುಳಿತುಕೊಳ್ಳಬೇಕಾಯಿತು. ಉಪಾಧ್ಯಾಯಿನಿಯರು ಹುಡುಗಿ ಯರಿಗೆ ಕೊಡುತ್ತಿದ್ದಷ್ಟು ಗಮನವನ್ನು ಈಕೆಗೆ ಕೊಡಲಿಲ್ಲ. ಅದರಿಂದ ಅಲ್ಲಿಯೂ ಈಕೆಯು ಸುಮ್ಮನೆ ಒಂದು ಗೊಂಬೆಯಂತೆ ಕುಳಿತಿರಬೇಕಾ ಯಿತು. ಹೀಗೆ ಬಾಂದ್ರದ ಕಾನ್ವೆಂಟಿನಲ್ಲಿ ಎರಡು ತಿಂಗಳು ಕಳೆದ ಮೇಲೆ ಈಕೆಯನ್ನು ಬೊಂಬಾಯಿಯ ಸ್ಕಾಟಿಷ್ ಮಿಷನ್ ಸ್ಕೂಲಿಗೆ ಕಳುಹಿ ಸಲು ಡಾ|| ಖಾಂಡ್ವಾಲಾರವರು ನಿಶ್ಚಯಿಸಿದರು. ಅಲ್ಲಿಯೂ ಈಕೆಯ ವಯಸ್ಸು ಮೀರಿದ್ದುದರಿಂದ ಹೆಚ್ಚಾಗಿ ಈಕೆಯನ್ನು ಮಕ್ಕಳ ಸಂಗಡ ಓದಲು ಸೇರಿಸದೆ ಇದ್ದರು. ಅಂತು, ಹೀಗೆಯೇ ಆ ಮಿಷನ್ ಸ್ಕೂಲಿನಲ್ಲಿ ಪಾರ್ವತೀಬಾಯಿಯು ಮೂರು ವರ್ಷಗಳು ಇದ್ದು ಇಂಗ್ಲಿಷು ಮೂರ ನೆಯ ತರಗತಿಯ ವರೆಗೂ ಓದಿದಳು. ಹೀಗೆ ನಿಧಾನವಾಗಿ ತಡವರಿಸಿ ಕೊಂಡು ಇಂಗ್ಲಿಷು ಕಲಿಯುವ ಹವ್ಯಾಸದಲ್ಲಿ ತನ್ನ ಮನಸ್ಸಿಗೆ ಪ್ರಿಯ ವಾದ ಆಶ್ರಮದ ಕೆಲಸವನ್ನು ನಿಲ್ಲಿಸುವುದು ಪಾರ್ವತೀಬಾಯಿಗೆ ಸಮ್ಮತ ವಿರಲಿಲ್ಲ. ಅಲ್ಲಿಯೂ ಸ್ಕೂಲು ಮುಗಿದ ಮೇಲೆ ಸಿಕ್ಕುವ ವಿರಾಮದಲ್ಲಿ ಬೊಂಬಾಯಿಯಲ್ಲಿಯೇ ತನ್ನ ಕೈಲಾದಷ್ಟು ವಸೂಲಿಯನ್ನು ಆಶ್ರಮ ಕ್ಕಾಗಿ ಮಾಡುತ್ತಿದ್ದಳು. ರಜೆಯ ಕಾಲದಲ್ಲಿ ಈಕೆಯು ಆಶ್ರಮಕ್ಕೆ ಬರು ತ್ತಿದ್ದಳು. ರಜೆಯಲ್ಲಿ ಪ್ರೊ|| ಕರ್ವೆಯವರು ಹೆಚ್ಚು ಮುತುವರ್ಜಿಯಿಂದ ಈಕೆಗೆ ಇಂಗ್ಲೀಷು ಕಲಿಸುತ್ತಿದ್ದರು. ಹೀಗೆ ಪಾರ್ವತೀಬಾಯಿಯು ಸುಮಾರಾಗಿ ಇಂಗ್ಲಿಷು ಓದುವುದನ್ನು ಕಲಿತಳು. ಆದರೆ ಮಾತನಾಡು ವುದಕ್ಕೆ ಮಾತ್ರ ಬರಲಿಲ್ಲ.

ಮೂರು ವರ್ಷ ಕಷ್ಟಪಟ್ಟರೂ ತಕ್ಕ ಫಲ ದೊರೆಯದುದರಿಂದ ಪ್ರೊ|| ಕರ್ವೆಯವರ ಮಗ ಡಾ|| ಶಂಕರ ಕರ್ವೆಯವರು ಪಾರ್ವತೀ ಬಾಯಿಯನ್ನು ಯಾರಾದರೂ ಪಾಶ್ಚಾತ್ಯರ ಮನೆಯಲ್ಲಿ ಕೆಲವು ಕಾಲ ಬಿಟ್ಟಿದ್ದರೆ ಬೇಗ ಇಂಗ್ಲಿಷು ಮಾತನಾಡಲು ಕಲಿಯಬಹುದೆಂದು ಸಲಹೆ ಕೊಟ್ಟರು. ಆದರೆ ಈಕೆಯನ್ನು ಮನೆಯಲ್ಲಿಟ್ಟುಕೊಳ್ಳುವಂಥ ಪಾಶ್ಚಾತ್ಯ ಕುಟುಂಬಿಗಳಾರು?

ಹೀಗೆಯೇ ಯೋಚಿಸುತ್ತಿರಲು ಪಾರ್ವತೀಬಾಯಿಗೆ ಚೆನ್ನಾಗಿ ಇಂಗ್ಲಿಷು ಬರಬೇಕಾದರೆ ಬರಿಯ ಇಂಗ್ಲಿಷು ಭಾಷೆಯನ್ನೇ ಆಡುವ ಪಾಶ್ಚಾತ್ಯ ದೇಶಗಳಿಗೆ ಕಳುಹಿಸುವುದೇ ಒಳ್ಳೆಯ ಉಪಾಯ, ಅಲ್ಲದೆ ಅಲ್ಲಿಯ ವಿದ್ಯಾಸಂಸ್ಥೆಗಳ ಪರಿಚಯವೂ ದೊರೆಯುವುದು ಮತ್ತು ಆಶ್ರಮದ ಪ್ರಚಾರಕ್ಕೂ ಅದರ ಕೆಲಸಗಳಿಗೂ ಸಹಾಯವೂ ದೊರೆಯುವುದು ಎಂದು ಪ್ರೊ|| ಕರ್ವೆಯವರು ಯೋಚಿಸಿದರು. ಅದರಂತೆ ಪಾರ್ವತೀ ಬಾಯಿಯನ್ನು ಅಮೆರಿಕೆಗೆ ಕಳುಹಿಸುವ ಏರ್ಪಾಡು ನಡೆಯಿತು. ಅಮೆರಿಕೆಗೆ ಹೋಗಬೇಕಾಗುವುದೆಂದು ಪಾರ್ವತೀಬಾಯಿಯು ಕನಸಿನಲ್ಲಿಯೂ ಕಂಡಿರಲಿಲ್ಲ. ಆಕೆಯ ಜೀವನದಲ್ಲಿ ತಾನು ಎಣಿಸದೆ ಇದ್ದ ಎಷ್ಟೋ ಘಟನೆಗಳು ಸಂಭವಿಸುತ್ತಲೇ ಇವೆ.

# ೧೩. ಅಮೆರಿಕೆಯ ಪ್ರವಾಸಕ್ಕೆ ಸಿದ್ಧತೆ

ನಲವತ್ತೆಂಟು ವರ್ಷದವಳಾದ ಪಾರ್ವತೀಬಾಯಿಯನ್ನು ಅಮೆರಿಕೆಗೆ ಕಳುಹಿಸಬೇಕೆಂಬ ಪ್ರೊ|| ಕರ್ವೆಯವರ ಯೋಚನೆಯನ್ನು ಅವರ ಆಪ್ತ ಸ್ನೇಹಿತರಾಗಲಿ ವಿಧವಾಶ್ರಮದ ಅಧಿಕಾರಿಗಳಾಗಲಿ ಒಪ್ಪಲಿಲ್ಲ. ಪಾಶ್ಚಾತ್ಯದೇಶಗಳಿಗೆ ಹೋಗುವವರೆಂದರೆ ಕಡೆಯಪಕ್ಷ ಬಿ. ಎ. ಆದರೂ ಪಾಸು ಮಾಡಿದ ಆಧುನಿಕ ರೀತಿಯ ಸ್ತ್ರೀಯಾಗಿರಬೇಕು. ಸುಮ್ಮನೆ ಏನೂ ತಿಳಿಯದ ನಲವತ್ತೆಂಟು ವರ್ಷದ ಪಾರ್ವತೀಬಾಯಿ ಅಲ್ಲಿ ಪ್ರಾಣ ಬಿಡುವುದಕ್ಕೆ ಹೋಗಬೇಕೇ ಹೊರತು ಇನ್ಯಾವ ಉದ್ದೇಶವನ್ನೂ ಸಾಧಿಸಲಾರಳು ಎನ್ನುತ್ತಿದ್ದರು.

ಆದರೆ ಪ್ರೊ|| ಕರ್ವೆಯವರು ಪಾರ್ವತೀಬಾಯಿಯನ್ನು ಅಮೆರಿಕೆಗೆ ಕಳುಹಿಸಬೇಕೆಂದು ತೀರ್ಮಾನಿಸಿದುದರ ಕಾರಣ ಇದು: ಪಾಶ್ಚಾತ್ಯದೇಶಗಳಿಗೆ ಹೋಗಿ ವ್ಯಾಸಂಗಮಾಡಿ ಬರುವಷ್ಟು ಸಾಮರ್ಥ್ಯವುಳ್ಳ ಪದವೀಧರರಾದ ಹೆಂಗುಸರು ಆಶ್ರಮದ ಪೈಕಿ ಆಗ ಯಾರೂ ಇರಲಿಲ್ಲ. ಅವರ ಖರ್ಚುವೆಚ್ಚಗಳಿಗೆ ತಗಲುವ ಎಲ್ಲಾ ಹಣವನ್ನೂ ಒದಗಿಸಲು ಯಾವ ಸಂಸ್ಥೆಯೂ ಮುಂದೆ ಬರಲಿಲ್ಲ. ತಮ್ಮ ಸಂಸ್ಥೆಗೆ ಅಂಥ ಚೈತನ್ಯವಿರಲಿಲ್ಲ. ಆಶ್ರಮದ ಕೆಲಸಗಳಲ್ಲಿ ಪಾರ್ವತೀಬಾಯಿಗಿಂತ ಹೆಚ್ಚು ಅನುಭವಸ್ಥರಾದವರು ಮತ್ತಾರೂ ಇರಲಿಲ್ಲ. ಈಕೆಯಾದರೆ ಯಾವ ಕೆಲಸವನ್ನಾದರೂ ಧೈರ್ಯದಿಂದ ಮಾಡಿ ತನ್ನ ಖರ್ಚು ಕಳೆದು ಆಶ್ರಮಕ್ಕೂ ಹಣ ಕೂಡಿಸುವ ಸಾಮರ್ಥ್ಯ ಹೊಂದಿರುವಳು; ಈಕೆಯ ವೆಚ್ಚಕ್ಕಾಗಿ ಯಾರೂ ಹೊಣೆಯಾಗಬೇಕಾಗಿಲ್ಲ ಎಂದು ಕರ್ವೆಯವರು ನಂಬಿದ್ದರು. ಪಾರ್ವತೀಬಾಯಿಯೂ ಗುರುಗಳ ಅಭಿಪ್ರಾಯವನ್ನು ಸಮರ್ಥಿಸಿದಳು. ಈ ಎಲ್ಲ ಕಾರಣಗಳಿಂದ ಪಾರ್ವತೀಬಾಯಿಯ ಪಾಶ್ಚಾತ್ಯದೇಶದ ಪ್ರವಾಸವು ಸ್ಥಿರವಾಯಿತು.

ಪ್ರೊ|| ಕರ್ವೆಯವರು ಪಾರ್ವತೀಬಾಯಿಯನ್ನು ಮೊದಲು ಇಂಗ್ಲೆಂಡಿಗೆ ಕಳುಹಿಸಬೇಕೆಂದು ಯೋಚಿಸಿದ್ದರು. ಆಗ ಮಹಾಯುದ್ಧವು

ಇನ್ನೂ ಜರುಗುತ್ತಿತ್ತು. ಆದುದರಿಂದ ಇಂಗ್ಲೆಂಡಿಗೆ ಪ್ರಯಾಣಮಾಡಲು ಯಾರಿಗೂ ಅವಕಾಶವೇ ಇರಲಿಲ್ಲ. ಇಂಗ್ಲೆಂಡಿಗೆ ಸಮಾನವಾದ ದೇಶ ವೆಂದರೆ ಅಮೆರಿಕ. ಅಲ್ಲಿಯ ಸ್ತ್ರೀಯರು ವಿದ್ಯೆಯಲ್ಲಿ ಬಹಳ ಮುಂದುವರಿದಿದ್ದಾರೆ. ಸಾಮಾಜಿಕ ಮತ್ತು ವೈಜ್ಞಾನಿಕ ದೃಷ್ಟಿಯಿಂದಲೂ ಅಲ್ಲಿಯ ಸ್ತ್ರೀಯರು ಇತರ ಎಲ್ಲ ಜನಾಂಗದವರಿಗೂ ಮೇಲ್ಪಙ್ಕ್ತಿಯಂತಿದ್ದಾರೆ. ಆದುದರಿಂದ ಪಾರ್ವತೀಬಾಯಿಯು ಆ ದೇಶದಲ್ಲಿ ಸಂಚರಿಸುವುದರಿಂದ ಹೆಚ್ಚು ಪ್ರಯೋಜನ ಹೊಂದಬಹುದು ಎಂದು ಕರ್ವೆಯವರ ಅಭಿಪ್ರಾಯ. ಅದರಂತೆ ೧೯೧೮ರಲ್ಲಿ ಪಾರ್ವತೀಬಾಯಿಯನ್ನು ಅಮೆರಿಕೆಗೆ ಕಳುಹಿಸುವ ಏರ್ಪಾಡು ನಡೆಯಿತು.

ಆ ವೇಳೆಗೆ ಪ್ರೊ|| ಧರ್ಮಾನಂದ ಕೋಸಾಂಬಿ ಎಂಬುವವರು ಅಮೆರಿಕೆಯ ಹಾರ್ವ್ಯಾರ್ಡ್ ವಿಶ್ವವಿದ್ಯಾನಿಲಯದಲ್ಲಿ 'ಪಾಳಿ' ಭಾಷೆಯನ್ನು ಬೋಧಿಸಲು ನಿಯಮಿತರಾಗಿದ್ದು ಪ್ರಯಾಣ ಮಾಡುವುದರಲ್ಲಿದ್ದರು. ವಿಚಾರಿಸಲಾಗಿ ಅವರು ಪಾರ್ವತೀಬಾಯಿಯನ್ನು ಸಂಗಡ ಕರೆದುಕೊಂಡು ಹೋಗಲು ಒಪ್ಪಿದರು. ಪ್ರೊ|| ಕರ್ವೆಯವರು ಟಿಕೆಟ್ಟು ಮತ್ತು ಮೇಲಿನ ಖರ್ಚಿಗಾಗಿ ಸ್ವಲ್ಪ ಹಣವನ್ನು ಪ್ರೊ|| ಕೋಸಾಂಬಿಯವರ ಕೈಗೆ ಕೊಟ್ಟು ಪಾರ್ವತೀಬಾಯಿಯನ್ನು ಕಳುಹಿಸಿದರು.

ಅಮೆರಿಕೆಯ ಹವಾ ಹೇಗೆ, ಅಲ್ಲಿ ಯಾವ ಬಗೆಯ ಉಡುಪು ಆವಶ್ಯಕ ಎಂಬುದು ಪಾರ್ವತೀಬಾಯಿಗೆ ಹೇಗೆ ತಿಳಿಯಬೇಕು! ತನಗೆ ತೋರಿದ ಮಟ್ಟಿಗೆ ನಾಲ್ಕು ಪೂನಾ ಸೀರೆಗಳು, ಆರು ಕುಪ್ಪಸಗಳು, ಒಂದು ಓವರ್ ಕೋಟು, ಕೆಲವು ನೈಟ್ ಗೌನುಗಳು ಮತ್ತು ಎರಡು ಜೊತೆ ಹೆಂಗುಸರ ಷೂಸ್ ಇವುಗಳನ್ನು ತೆಗೆದುಕೊಂಡು ಪಾರ್ವತೀಬಾಯಿಯು ಪ್ರಯಾಣಕ್ಕೆ ಸಿದ್ಧವಾದಳು. ಆದರೆ ಸಮುದ್ರಯಾನ ಮಾಡುವಾಗ ಪಾರ್ವತೀಬಾಯಿಯು ಪ್ರಯಾಣಕ್ಕೆ ಸರಿಯಾದ ಸಾಮಾನುಗಳನ್ನು ತೆಗೆದುಕೊಳ್ಳಲಿಲ್ಲವೆಂದು ತಿಳಿದುಕೊಂಡುದಲ್ಲದೆ ತುಂಬ ತೊಂದರೆಗಳಿಗೆ ಈಡಾಗಬೇಕಾಯಿತು.

೧೯೧೮ನೆಯ ಆಗಸ್ಟು ೫ನೆಯ ತಾರೀಖಿನ ದಿವಸ ಪಾರ್ವತೀಬಾಯಿಯು ತನ್ನವರನ್ನೂ ಮತ್ತು ತನ್ನ ಮಮತೆಯ ದೇಶವನ್ನೂ

ಬಹಳ ವ್ಯಸನದಿಂದ ಬೀಳ್ಕೊಂಡು, ಪ್ರೊ|| ಕೋಸಾಂಬಿಯವರ ಸಂಗಡ ಹಾಂಕಾಂಗ್ ನಗರಕ್ಕೆ ಹೋಗುವ ಪಿ. ಎಂಡ್ ಒ. ಜಹಜಿನಲ್ಲಿ ಪ್ರಯಾಣ ಬೆಳೆಸಿದಳು.

ಪ್ರೊ|| ಕೋಸಾಂಬಿಯವರು ಆಗ ತಾನೆ ಪ್ರೀವಿಯಸ್ ಪರೀಕ್ಷೆಯನ್ನು ಕೊಟ್ಟಿದ್ದ ತಮ್ಮ ಮಗಳನ್ನೂ ಮತ್ತು ಹದಿನಾಲ್ಕು ವರ್ಷದ ಮಗನನ್ನೂ ಜೊತೆಯಲ್ಲಿ ಕರೆದುಕೊಂಡು ಹೊರಟಿದ್ದರು.

## ೧೪. ಸಮುದ್ರಯಾನ

ಜಹಜು ಮಾಮೂಲಿನಂತೆ ಬೊಂಬಾಯಿ ರೇವನ್ನು ಬಿಟ್ಟು ಮುಂದೆ ಸಾಗಿತು. ಆದರೆ ಮಾತೃಭೂಮಿಯು ಕಣ್ಣಿಗೆ ದೂರವಾದಂತೆಲ್ಲ ಪಾರ್ವತೀಬಾಯಿಯ ಮನಸ್ಸಿನಲ್ಲಿ ಆದ ಆಂದೋಳನ ಎಂತಹುದೆಂದು ಅನುಭವಿಸಿದವರಿಗೆ ಸಾಧ್ಯವೇ ವಿನಾ ಬರೆಯುವುದಕ್ಕೆ ಸಾಧ್ಯವಿಲ್ಲ. ಅವರ ಜಹಜು ಹಾಂಕಾಂಗ್‌ವರೆಗೂ ಹೋಗುವುದಾಗಿತ್ತು. ಅಲ್ಲಿಂದ ಮುಂದೆ ಜಹಜನ್ನು ಬದಲಾಯಿಸಿ ಸಾನ್‌ಫ್ರಾನ್ಸಿಸ್ಕೋವಿಗೆ ಹೋಗಬೇಕು. ಜಹಜಿನಲ್ಲಿ ಒಂದು ಗುಜರಾತಿ ವರ್ತಕ ಕುಟುಂಬದವರು ಸಿಂಗಪುರಕ್ಕೂ ಒಬ್ಬ ಸಿಕ್ ಗೃಹಸ್ಥರು ಹಾಂಕಾಂಗಿಗೂ ಮತ್ತು ಅಮೆರಿಕೆಗೆ ಹೋಗುವ ಅಹಮದಾಬಾದಿನ ವಿದ್ಯಾರ್ಥಿಯೊಬ್ಬರೂ ಪ್ರಯಾಣಮಾಡುತ್ತಿದ್ದರು. ಎಂದೂ ಜಹಜಿನ ಪ್ರಯಾಣಮಾಡದೆ ಇರುವವರಿಗೆ ಜಹಜಿನ ಕೊಠಡಿಗಳು, ಸ್ನಾನದ ಮತ್ತು ಊಟದ ಏರ್ಪಾಡುಗಳು ತೀರ ಹೊಸದಾಗಿದ್ದು ಬಹಳ ಜುಗುಪ್ಸೆಯಾಗುತ್ತದೆ. ಪ್ರೊ|| ಕೋಸಾಂಬಿಯವರ ಮಗಳೂ ಪಾರ್ವತೀಬಾಯಿಯೂ ಒಂದು ಕ್ಯಾಬಿನ್ನಿನಲ್ಲಿದ್ದರು.

ಮೊದಲಿನಿಂದಲೂ ಸಸ್ಯಾಹಾರಿಗಳಾಗಿದ್ದು ಆ ನಿಯಮವನ್ನೇ ಪಾಲಿಸಿಕೊಂಡಿರಬೇಕೆನ್ನುವವರಿಗೆ ಜಹಜಿನ ಊಟದ ಏರ್ಪಾಡು ಸ್ವಲ್ಪವೂ ಸರಿಹೋಗುವುದಿಲ್ಲ. ಅಂಥವರು ಬರಿಯ ಬ್ರೆಡ್ಡು, ಬೆಣ್ಣೆ, ಹಣ್ಣುಗಳನ್ನು ತಿಂದುಕೊಂಡೇ ಇರಬೇಕು. ಇದರಿಂದ ಪಾರ್ವತೀಬಾಯಿಗೆ ಊಟಕ್ಕೆ ಬಹಳ ತಾಪತ್ರಯಕ್ಕಿಟ್ಟುಕೊಂಡಿತು. ಜಹಜಿನ ಭೋಜನ ಶಾಲೆಗೆ ನೆಪಮಾತ್ರಕ್ಕೆ ಪಾರ್ವತೀಬಾಯಿಯು ಹೋಗಿ ಕುಳಿತುಕೊಳ್ಳುತ್ತಿದ್ದಳು. ಅಲ್ಲಿ ಈಕೆಯು ಯಾವುದನ್ನೂ ತಿನ್ನುವಂತೆ ಇಲ್ಲದಿದ್ದರೂ ಐರೋಪ್ಯರು ಮೇಜಿನ ಮೇಲೆ ಭೋಜನವನ್ನು ಏರ್ಪಡಿಸುವ ಕ್ರಮವನ್ನೂ ಮತ್ತು ಅವರ ಊಟದ ನಡತೆ(Table manners)ಯ ವಿಷಯಗಳನ್ನೂ ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ ಒಳ್ಳೆಯ ಅವಕಾಶವಾಯಿತು.

ಪಾರ್ವತೀಬಾಯಿಗೆ ಬರಿಯ ರೊಟ್ಟಿ ಬೆಣ್ಣೆಯನ್ನು ತಿಂದುಕೊಂಡಿರುವುದು, ಮೊದಲು ಬಹಳ ಕಷ್ಟವಾಗಿ ಕಂಡಿತು. ಹಡಗಿನಲ್ಲಿದ್ದ ಗುಜರಾತಿ ವರ್ತಕರು ಅಲ್ಲಿಯೇ ಸ್ವಂತವಾಗಿ ಕೆಲವು ಅಡಿಗೆಗಳನ್ನು ಮಾಡಿಕೊಳ್ಳುತ್ತಿದ್ದರು. ಅವರ ಸ್ನೇಹ ಸಂಪಾದಿಸಿದ ಮೇಲೆ ಪಾರ್ವತೀಬಾಯಿಗೆ ನಿತ್ಯವೂ ಸ್ವಲ್ಪ ಭಾರತೀಯ ಆಹಾರವು ಸಿಕ್ಕುತ್ತಿತ್ತು.

ಬೊಂಬಾಯಿ ಬಿಟ್ಟ ಮೇಲೆ ಜಹಜು ಕೊಲಂಬೋದಲ್ಲಿ ತಂಗಿತು. ಅಲ್ಲಿ ಆರು ಗಂಟೆಗಳ ಕಾಲ ವಿರಾಮ ಮಾತ್ರವೇ ಇದ್ದಿತು. ಪ್ರೊ|| ಕೋಸಾಂಬಿಯವರ ಸ್ನೇಹಿತರೊಬ್ಬರು ಆ ಸ್ವಲ್ಪಕಾಲದಲ್ಲಿಯೇ ಇವರನ್ನು ಮೋಟಾರಿನಲ್ಲಿ ಕರೆದುಕೊಂಡು ಹೋಗಿ ಅಲ್ಲಿಯ ಒಂದು ಪ್ರಸಿದ್ಧ ಬುದ್ಧದೇವಾಲಯವನ್ನು ತೋರಿಸಿದರು. ಎಂದೂ ಐರೋಪ್ಯ ರೀತಿಯ ಪಾದರಕ್ಷೆಗಳನ್ನು ಉಪಯೋಗಿಸದೆ ಇದ್ದ ಪಾರ್ವತೀಬಾಯಿಯು ಆ ದಿವಸ ಆ ಜೋಡುಗಳ ದೆಸೆಯಿಂದ ಬಹಳ ತೊಂದರೆ ಪಡಬೇಕಾಯಿತು. ಆ ಅನುಭವದಿಂದ ಆಕೆಯು ನಮ್ಮ ಮಹಿಳೆಯರಾರಾದರೂ ಪಾಶ್ಚಾತ್ಯ ದೇಶಗಳಿಗೆ ಹೋಗಬೇಕೆಂದು ಅಪೇಕ್ಷಿಸುವುದಾದರೆ ಅಂಥವರು ಕೊನೆಯ ಪಕ್ಷ ಮೂರು ತಿಂಗಳ ಮುಂಚಿನಿಂದಲೂ ಐರೋಪ್ಯ ರೀತಿಯ ಪಾದರಕ್ಷೆಗಳನ್ನು ಉಪಯೋಗಿಸುವ ಅಭ್ಯಾಸ ಮಾಡುವುದು ಒಳ್ಳೆಯದೆಂದು ಹೇಳುತ್ತಾಳೆ.

ಕೊಲಂಬೋವಿನಿಂದ ಸಿಂಗಪೂರ್ ತಲಪಿದರು. ಇದುವರೆಗೂ ಪಾರ್ವತೀಬಾಯಿಗೆ ಊಟಕೊಡುತ್ತಿದ್ದ ಗುಜರಾತಿ ಸಂಸಾರದವರು ಈಕೆಯನ್ನು ಸಿಂಗಪುರದ ತಮ್ಮ ಮನೆಗೆ ಕರೆದುಕೊಂಡು ಹೋಗಿ ಬಹಳ ಉಪಚಾರಮಾಡಿದರು. ಆ ಎರಡು ದಿವಸಗಳು ಭೂಮಿಯ ಮೇಲಿದ್ದುದು ಪಾರ್ವತೀಬಾಯಿಗೆ ಬಹಳ ಆನಂದಕರವಾಗಿದ್ದಿತು. ನಂತರ ಸಿಂಗಪುರದಿಂದ ಹಾಂಕಾಂಗ್ ತಲಪಿದರು. ಅಲ್ಲಿ ಇವರು ಜಹಜನ್ನು ಬದಲಾಯಿಸಬೇಕಾಗಿದ್ದುದರಿಂದ ಮೂರು ದಿವಸಗಳು ತಂಗಬೇಕಾಯಿತು. ಇವರ ಸಂಗಡ ಅಮೆರಿಕೆಗೆ ಪ್ರಯಾಣಮಾಡಿದ್ದ ವಿದ್ಯಾರ್ಥಿಯಾದ ಮಿ|| ಮೆಹತರವರ ಸಹಾಯದಿಂದ ಇವರೆಲ್ಲರೂ ಹಾಂಕಾಂಗಿನಲ್ಲಿ ನೆಲಸಿದ್ದ ಸಿಕ್ ವರ್ತಕರೊಬ್ಬರ ಮನೆಯಲ್ಲಿ ಆ ಮೂರು ದಿನ

ಗಳನ್ನು ಕಳೆದರು. ಹಾಂಕಾಂಗ್‌ನಿಂದ ಸ್ಯಾನ್‌ಫ್ರಾನ್‌ಸಿಸ್‌ಕೊವಿಗೆ ಹೋಗುವ ಎಸ್. ಎಸ್. "ಟೆನ್ನುಮಾರು" ಎಂಬ ಜಪಾನೀಯ ಜಹಜಿನಲ್ಲಿ ಮುಂದಕ್ಕೆ ಪ್ರಯಾಣಮಾಡಿದರು. ಈ ಜಪಾನೀಯ ಜಹಜಿನಲ್ಲಿ ಭಾರತೀಯರು ಮೊದಲ ತರಗತಿಯಲ್ಲಿ ಮಾತ್ರ ಪ್ರಯಾಣ ಮಾಡಬಹುದೆಂಬ ನಿರ್ಬಂಧ. ಇದರಿಂದ ಭಾರತೀಯರಿಗೆ ವಿಪರೀತ ಧನವ್ಯಯವಾಗುವುದು. ಆದರೂ ಗತ್ಯಂತರವಿಲ್ಲದೆ ಹಾಗೆಯೇ ಪ್ರಯಾಣ ಮಾಡಬೇಕಾಯಿತು.

ಜಹಜು ಹಾಂಕಾಂಗ್‌ನಿಂದ ಷಾಂಗೈ, ನಾಗಸಾಕಿ, ಮೊದಲಾದ ರೇವುಪಟ್ಟಣಗಳನ್ನು ದಾಟಿ ಟೋಕಿಯೋ ನಗರವನ್ನು ಮುಟ್ಟಿತು. ಟೋಕಿಯೋದಲ್ಲಿದ್ದ ಮೆಹತರವರ ಸ್ನೇಹಿತರಾದ ಶಾಂತಿಲಾಲ್ ಎಂಬುವವರು ಇವರೆಲ್ಲರನ್ನೂ ಆದರಿಸಿ ಆ ಪಟ್ಟಣದ ಪ್ರಖ್ಯಾತವಾದ ಸಂಸ್ಥೆಗಳಲ್ಲೊಂದಾದ "ಮಹಿಳಾ ವಿದ್ಯಾಪೀಠ" ವನ್ನು ತೋರಿಸಿದರು. ಆಗ ಪಾರ್ವತೀಬಾಯಿಗೆ ತಮ್ಮ ಗುರುಗಳಾದ ಪ್ರೊ|| ಕರ್ವೆಯವರು ಪುಣೆಯಲ್ಲಿ ಸ್ಥಾಪಿಸಿರುವ "ಹಿಂದೂ ಮಹಿಳಾ ವಿದ್ಯಾಪೀಠ" ದ ನೆನಪಾಗಿ ಮೈಮರೆಯುವಂತಾಯಿತು.

ಸಿಂಗಪುರವನ್ನು ಬಿಟ್ಟಮೇಲೆ ಪಾರ್ವತೀಬಾಯಿಗೆ ಊಟ ಕೊಡುತ್ತಿದ್ದ ಗುಜರಾತಿಯವರ ಜೊತೆ ತಪ್ಪಿದುದರಿಂದ ಮತ್ತೆ ಊಟದ ಸಮಸ್ಯೆ ಬಂತು. ಅಲ್ಲದೆ ಆ ಜಹಜಿನಲ್ಲಿ ಎಂಜಿನ್ನಿನ ಪಕ್ಕದ ಕೊಠಡಿಯೇ ಈಕೆಯದು. ಅಲ್ಲಿ ಯಂತ್ರಗಳ ಗಲಾಟೆ ಮತ್ತು ಶಾಖವು ವಿಪರೀತವಾಗಿದ್ದು ಪಾರ್ವತೀಬಾಯಿಗೆ ಬಹಳ ತೊಂದರೆಯುಂಟಾಗಿ ಕ್ರಮೇಣ ಕೆಮ್ಮು ಜ್ವರಕ್ಕೆ ಇಟ್ಟುಕೊಂಡಿತು. ಸಂಗಡಿಗರು ಈಕೆಗೆ ಆಹಾರ ಸಾಲದುದರಿಂದಲೂ, ಊರಿನವರ ಹಂಬಲ ಹೆಚ್ಚಾಗಿರುವುದರಿಂದಲೂ ಈ ಖಾಯಿಲೆ ಬಂತೆಂದು ಹೇಳಿದರು. ಖಾಯಿಲೆಯ ಸಮಯದಲ್ಲಿ ವಿದ್ಯಾರ್ಥಿ ಮೆಹತರವರು ಪಾರ್ವತೀಬಾಯಿಗೆ ತುಂಬಾ ಸಹಾಯ ಮಾಡಿದರು. ಹಡಗಿನ ಕೊಠಡಿಗಳಲ್ಲಿ ಅನೇಕ ಎಲೆಕ್ಟ್ರಿಕ್ ಗುಂಡಿಗಳಿರುತ್ತವೆ. ಅವು ಏಕೆ, ಅವುಗಳ ಉಪಯೋಗವೇನು ಎಂಬುದೇ ಪಾರ್ವತೀಬಾಯಿಗೆ ಗೊತ್ತಿರಲಿಲ್ಲ. ಯಾವ ಗುಂಡಿಯನ್ನೊತ್ತಿದರೆ ಏನು ಕೆಲಸವಾಗುತ್ತದೆ

ಎಂಬುದನ್ನೆಲ್ಲ ಮೆಹತರವರು ಈಕೆಗೆ ಹೇಳಿಕೊಟ್ಟರು. ಹಾಗೆ ಒಂದು ಗುಂಡಿಯನ್ನು ಒತ್ತಲು ಒಬ್ಬ ನರ್ಸ್ (ದಾದಿ) ಬಂದಳು. ಅವಳು ಪಾರ್ವತೀಬಾಯಿಯ ಅಸ್ವಸ್ಥತೆಯನ್ನು ನೋಡಿ ವೈದ್ಯನನ್ನು ಕರೆತಂದಳು. ವೈದ್ಯನು ಔಷಧಿಯನ್ನು ಕೊಟ್ಟನು. ಈ ಔಷಧಿಯಿಂದ ಆಕೆಗೆ ಸ್ವಲ್ಪ ಗುಣ ತೋರಿದರೂ ಕೆಮ್ಮು ಜ್ವರ ಪೂರ್ತಿಯಾಗಿ ವಾಸಿಯಾಗಲಿಲ್ಲ. ಡಾಕ್ಟರು ಪಾರ್ವತೀಬಾಯಿಗೆ ಬರಿಯ ಹಾಲಿನ ಪಥ್ಯವನ್ನಿಟ್ಟರು. ಹಡಗಿನಲ್ಲಿ ಹಾಲು ಸಿಕ್ಕುವುದೇ ಕಷ್ಟ. ದಕ್ಕಿದ ಸ್ವಲ್ಪ ಹಾಲಿನಲ್ಲಿಯೇ ಕಾಲ ಕಳೆಯಬೇಕಾಗಿ ಬಂದುದರಿಂದ ಆಕೆಗೆ ಬಹಳ ನಿತ್ರಾಣವಾಗಿ ಹೋಯಿತು. ಸಾನ್‌ಫ್ರಾನ್‌ಸಿಸ್ಕೋ ತಲಪಿದ ಮೇಲೂ ಖಾಯಿಲೆ ಹೀಗೆಯೇ ಇದ್ದರೆ ಗತಿಯೇನು? ಎಂದು ಆಕೆಗೆ ಬಹಳ ಯೋಚನೆಯಾಯಿತು. ಜಹಜು ಸಾನ್‌ಫ್ರಾನ್‌ಸಿಸ್ಕೋ ತಲಪಿತು. ಅಲ್ಲಿ ಸುಂಕ ಮತ್ತು ವೈದ್ಯಕೀಯ ಪ್ರಕರಣಗಳಲ್ಲಿ ಒಂದು ದಿವಸವೆಲ್ಲ ಕಳೆದು ಹೋಯಿತು. ಮಾರನೆಯ ದಿನ ಪ್ರೊ|| ಕೋಸಾಂಬಿಯವರು ಮಕ್ಕಳನ್ನೂ ಪಾರ್ವತೀಬಾಯಿಯನ್ನೂ ಕರೆದುಕೊಂಡು ಪಟ್ಟಣದೊಳಗಿನ ಒಂದು ವಿಶಾಲವಾದ ವಸತಿಗೃಹಕ್ಕೆ ಮೋಟಾರಿನಲ್ಲಿ ಹೊರಟರು. ಇವರ ಸಾಮಾನುಗಳಿನ್ನೂ ಬಂದಿರಲಿಲ್ಲ. ಬೆಚ್ಚನೆಯ ಉಡುಪು ಸಹ ಇಲ್ಲದೆ ಪಾರ್ವತೀಬಾಯಿಯು ಆ ವಸತಿಗೃಹದಲ್ಲಿ ಛಳಿಯಿಂದ ನಡುಗಿ ಹೋದಳು. ಪ್ರೊ|| ಕೋಸಾಂಬಿಯವರ ಮನೆಯವರು ಊಟಕ್ಕೆ ಒಂದು ಭೋಜನಶಾಲೆಗೆ ಹೋದರು. ಪಾರ್ವತೀಬಾಯಿಯು ತುಂಬಾ ನಿತ್ರಾಣವಾಗಿದ್ದುದರಿಂದ ತಾನಿದ್ದೆಡೆಗೇ ಸ್ವಲ್ಪ ಹಾಲನ್ನು ತಂದು ಕೊಟ್ಟರೆ ಸಾಕು ಎಂದು ಹೇಳಿದಳು. ಆ ದೇಶಗಳಲ್ಲಿ ಹಾಲನ್ನು ಸೀಸೆಗಳಲ್ಲಿ ಹಾಕಿ ಮಂಜುಗಡ್ಡೆಗಳಲ್ಲಿಡುವ ಪದ್ಧತಿ. ಅಂಥ ಕೊರೆಯುವ ಹಾಲನ್ನು ಮೊದಲೆ ಛಳಿಯಿಂದ ನಡುಗುತ್ತಿರುವ ಪಾರ್ವತೀಬಾಯಿಗೆ ಕುಡಿಯುವುದಕ್ಕಾದೀತೆ? ಇವರ ಹತ್ತಿರ ಬಿಸಿಮಾಡುವ ಸಲಕರಣೆಗಳು ಸಹ ಇಲ್ಲ. ಅಂತು ಆ ದಿವಸವೆಲ್ಲ ಉಪವಾಸದಲ್ಲಿಯೇ ಕಳೆಯಬೇಕಾಯಿತು. ಪಾರ್ವತೀಬಾಯಿಯ ಖಾಯಿಲೆಯು ಹೆಚ್ಚಾಯಿತು. ಈ ಸ್ಥಿತಿಯಲ್ಲಿ ಆಕೆಯನ್ನು ಬಾಸ್ಟನ್ ವರೆವಿಗೂ ರೈಲಿನಲ್ಲಿ ಪ್ರಯಾಣಮಾಡಿ

ಸುವುದು ಸರಿಯಲ್ಲವೆಂದು ತೋರಿತು. ಪ್ರೊ|| ಕೋಸಾಂಬಿಯವರಾದರೋ ಕೆಲಸಕ್ಕೆ ಕೂಡಲೆ ಹಾಜರಾಗಬೇಕಾಗಿತ್ತು. ಪಾರ್ವತೀಬಾಯಿಯು ಅವರ ಮನೆಯಲ್ಲಿಯೇ ಇದ್ದುಕೊಂಡು ಮನೆಯ ಕೆಲಸಗಳಿಗೆ ನೆರವಾಗಿ ರಾತ್ರಿಯ ಪಾಠಶಾಲೆಯಲ್ಲಿ ಇಂಗ್ಲಿಷ್ ವ್ಯಾಸಂಗಮಾಡಬೇಕೆಂದಿದ್ದಳು. ಆದರೆ ಈ ಖಾಯಿಲೆಯ ದೆಸೆಯಿಂದ ಆ ಯೋಚನೆಯನ್ನು ಮುಂದು ಹಾಕಬೇಕಾಯಿತು. ಆಕೆಯನ್ನು ರೈಲಿನಲ್ಲಿ ದೂರಪ್ರಯಾಣ ಮಾಡಿಸು ವಂತಿರಲಿಲ್ಲ. ಕಡೆಗೆ ಆಕೆಯ ಖಾಯಿಲೆಯು ವಾಸಿಯಾಗುವವರೆಗೂ ಸಾನ್‌ಫ್ರಾನ್‌ಸಿಸ್ಕೋದಲ್ಲಿಯೇ ತಿಳಿದವರ ಹತ್ತಿರ ಬಿಟ್ಟಿದ್ದು ನೆಮ್ಮದಿ ಯಾದನಂತರ ಬಾಸ್ಟನ್ನಿಗೆ ಕರೆಯಿಸಿಕೊಳ್ಳುವುದು ಎಂದು ಪ್ರೊ|| ಕೋಸಾಂಬಿಯವರು ನಿಶ್ಚಯಿಸಿದರು. ಪಾರ್ವತೀಬಾಯಿಯೂ ಆ ಸಲಹೆಗೆ ಒಪ್ಪಿದಳು.

ಪಾರ್ವತೀಬಾಯಿಯು ತನ್ನನ್ನು ಭಾರತದೇಶದಿಂದ ವ್ಯಾಸಂಗ ಕ್ಕಾಗಿ ಬಂದು ನೆಲೆಸಿರುವ ಯಾರಾದರೂ ಭಾರತೀಯ ವಿದ್ಯಾರ್ಥಿಯ ಬಳಿಯಲ್ಲಿ ಬಿಟ್ಟುಹೋಗಿರೆಂದು ಪ್ರೊ|| ಕೋಸಾಂಬಿಯವರನ್ನು ಕೇಳಿ ದಳು. ಆದರೆ ಅವರಿಗೆ ಅಂಥ ವಿದ್ಯಾರ್ಥಿಗಳನ್ನು ಹುಡುಕಿಕೊಂಡು ಹೋಗಲು ವಿರಾಮ ಇರಲಿಲ್ಲ. ಅಲ್ಲಿನ "ಯಂಗ್ ವಿಮೆನ್ಸ್ ಕ್ರಿಶ್ಚಿಯನ್ ಅಸೋಸಿಯೇಷನ್" (ವೈ. ಡಬ್ಲ್ಯು. ಸಿ. ಎ.) ಅಥವಾ ಕ್ರೈಸ್ತ ತರುಣಿ ಯರ ಸಂಘ ಎಂಬ ಸಂಸ್ಥೆಯ ಕಾರ್ಯದರ್ಶಿಯವರು ತಮಗೆ ಪರಿಚಿತರಾ ಗಿದ್ದುದರಿಂದ ಪಾರ್ವತೀಬಾಯಿಯನ್ನು ಆಕೆಯ ವಶಕ್ಕೆ ಒಪ್ಪಿಸಿದರು. ಪ್ರಯಾಣದ ಖರ್ಚು ಕಳೆದು ಉಳಿದ ಇನ್ನೂರು ಡಾಲರುಗಳನ್ನು ವೈ. ಡಬ್ಲ್ಯು. ಸಿ. ಎ. ಸೆಕ್ರೆಟರಿಯವರ ವಶಕ್ಕೆ ಒಪ್ಪಿಸಿ, ಪಾರ್ವತೀಬಾಯಿ ಯನ್ನು ಖಾಯಿಲೆ ವಾಸಿಯಾದ ಮೇಲೆ ಬಾಸ್ಟನ್ನಿಗೆ ಕಳುಹಿಸಬೇಕೆಂದೂ, ಒಂದುವೇಳೆ ಖಾಯಿಲೆ ಬೇಗ ವಾಸಿಯಾಗದಿದ್ದರೆ ಇಂಡಿಯಾದೇಶಕ್ಕೆ ವಾಪಸು ಕಳುಹಿಸಬೇಕೆಂದೂ ಹೇಳಿ ಪ್ರೊ|| ಕೋಸಾಂಬಿಯವರು ಮುಂದಕ್ಕೆ ಪ್ರಯಾಣ ಮಾಡಿದರು. ಬಹಳ ಉತ್ಸಾಹದಿಂದ ಸಂಗಡ ಕರೆದುಕೊಂಡು ಬಂದಿದ್ದ ಮಿತ್ರರಿಗೆ ಪಾರ್ವತೀಬಾಯಿಯನ್ನು ಈ ಸ್ಥಿತಿ ಯಲ್ಲಿ ಪರಸ್ಥಳದಲ್ಲಿ ಅಪರಿಚಿತರ ಮಧ್ಯೆ ಬಿಟ್ಟು ಹೋಗುವುದಕ್ಕೆ ಎಷ್ಟು ವ್ಯಥೆಯಾಗಿರಬಹುದೆಂದು ಓದುಗರು ಊಹಿಸಬಹುದು.

## ೧೫. ಕ್ರೈಸ್ತ ಸೋದರಿಯರ ವರ್ತನೆ

ಪಾರ್ವತೀಬಾಯಿಯು ಕ್ರೈಸ್ತ ತರುಣಿಯರ ಸಂಘಕ್ಕೆ ಬರುವ ವೇಳೆಗೆ ಜ್ವರ ಕೆಮ್ಮು ಹಾಗೆಯೇ ಇದ್ದಿತು. ಹೊಟೇಲಿಗಿಂತಲೂ ಸಂಘದ ಮಂದಿರದಲ್ಲಿ ಈಕೆಗೆ ಕೊಟ್ಟಿದ್ದ ಕೊಠಡಿಯು ಬೆಚ್ಚಗೆ ಬಹಳ ಅನುಕೂಲ ವಾಗಿದ್ದಿತು. ಅದರಿಂದ ಬೆಚ್ಚನೆಯ ಬಟ್ಟೆಗಳಿಲ್ಲದಿದ್ದಾಗ್ಯೂ ಚಳಿಯಿಂದ ತೊಂದರೆ ಪಡುವುದು ತಪ್ಪಿತು. ಆ ಕೊಠಡಿಗೆ ದಿನ ಒಂದಕ್ಕೆ 2½ ಡಾಲರ್ ಬಾಡಿಗೆ ಕೊಡಬೇಕಾಗಿತ್ತು. ಬಾಡಿಗೆ ಹೆಚ್ಚಾದುದರಿಂದ, ತಮ್ಮಲ್ಲಿ ಉಳಿದಿದ್ದ ಸ್ವಲ್ಪ ಹಣದಲ್ಲಿ ವೈದ್ಯರಿಗೆ ಬೇರೆ ತೆತ್ತು ಔಷಧಿ ತೆಗೆದುಕೊಳ್ಳಲು ಪಾರ್ವತೀಬಾಯಿಯ ಮನಸ್ಸಿಗೆ ಒಪ್ಪಲಿಲ್ಲ. ಆದುದ ರಿಂದ ಈಕೆಯು ತನ್ನ ಬೇನೆಗೆ ಸುಲಭವಾದ ಒಂದು ಚಿಕಿತ್ಸೆಯನ್ನು ತಾನೇ ಯೋಚಿಸಿಕೊಂಡಳು: ಪ್ರತಿನಿತ್ಯವೂ ಸಾಯಂಕಾಲ ಅರ್ಧ ಘಂಟೆಯಕಾಲ ಎದೆಗೆ ಬಿಸಿನೀರಿನ ಶಾಖ ಕೊಟ್ಟು ಸುಮ್ಮನೆ ಮಲಗಿರು ವುದು. ಈ ಚಿಕಿತ್ಸೆಯಿಂದ ಬಹಳ ಅನುಕೂಲವಾಗಿ ನಾಲ್ಕೈದು ದಿವಸ ಗಳಲ್ಲಿಯೇ ಕೆಮ್ಮು ಜ್ವರ ನಿಂತು ಆಕೆಯು ಆರೋಗ್ಯ ಹೊಂದಿದಳು. ಇಷ್ಟು ಮಟ್ಟಿಗೆ ಕರುಣೆ ತೋರಿ ತನ್ನ ಖಾಯಿಲೆಯು ವಾಸಿಯಾಗುವಂತೆ ಮಾಡಿದುದಕ್ಕಾಗಿ ಆಕೆಯು ಭಗವಂತನನ್ನು ಬಹಳವಾಗಿ ಸ್ತೋತ್ರ ಮಾಡಿದಳು.

ಪಾರ್ವತೀಬಾಯಿಯು ಹೊಸದಾಗಿ ಪರಿಚಿತರಾದ ಕ್ರೈಸ್ತ ಸೋದರಿಯರ ಬಿಡಾರಕ್ಕೆ ಹೋದಾಗ ಬಹಳ ಬಲಹೀನವಾಗಿದ್ದಳು. ಈಕೆಗೆ ಬೇನೆಯು ಹಾಗೆಯೇ ಇದ್ದಿತು. ಅಲ್ಲದೆ ಇಂಗ್ಲಿಷ್ ಮಾತನಾ ಡಲು ಸರಿಯಾಗಿ ಬಾರದು. ಮತ್ತು ಇಂಗ್ಲಿಷಿನಲ್ಲಿ ಮಾತನಾಡಿದುದನ್ನು ಅರ್ಥಮಾಡಿಕೊಳ್ಳುವುದಕ್ಕೂ ಆಗುತ್ತಿರಲಿಲ್ಲ. ಅದರಲ್ಲಿಯೂ ಅಮೆರಿಕೆ ಯವರ ಉಚ್ಚಾರಣೆಯು ವಿಚಿತ್ರವಾಗಿರುವುದಲ್ಲದೆ ಅವರು ಬಹಳ ಬೇಗ ಮಾತನಾಡುವರು. ಈ ಕಾರಣಗಳಿಂದ ಪಾರ್ವತೀಬಾಯಿಗೆ ಕೆಲವು ಸಂದರ್ಭಗಳಲ್ಲಿ ಏನೂ ತೋರದಂತಾಗುತ್ತಿತ್ತು,

ಕ್ರೈಸ್ತ ತರುಣಿಯರ ಸಂಘದ ಕಾರ್ಯದರ್ಶಿಯವರು ಬಹಳ ಒಳ್ಳೆಯ ಸ್ವಭಾವದವರು. ಆಕೆಯು ಪಾರ್ವತೀಬಾಯಿಯನ್ನು ತನ್ನ ಸಂಗಡ ಭೋಜನಶಾಲೆಗೆ ಕರೆದುಕೊಂಡು ಹೋದಳು. ಅಲ್ಲಿ ಪಾರ್ವತೀ ಬಾಯಿಯು ರೊಟ್ಟಿ, ಬೆಣ್ಣೆ, ಹಾಲು, ಹಣ್ಣುಗಳಲ್ಲದೆ ಮತ್ತೇನೂ ತಿನ್ನು ವಂತಿರಲಿಲ್ಲ. ಈಕೆಗೆ ಅಷ್ಟು ದೂರ ನಡೆಯಲು ಶಕ್ತಿ ಸಾಲದು. ಆದ ರಿಂದ ಪಾರ್ವತೀಬಾಯಿಯು ಊಟವನ್ನು ತಾನಿದ್ದಲ್ಲಿಗೇ ತರಿಸಲು ಆಗುತ್ತದೆಯೇ ಎಂದು ಕೇಳಿದಳು. ಅಂದಿನಿಂದ ಆ ಕಾರ್ಯದರ್ಶಿ ಯವರೇ ಪಾರ್ವತೀಬಾಯಿಗೆ ಆಹಾರ ತಂದು ಕೊಡುತ್ತಿದ್ದರು.

ಹೀಗೆ ಸಂಘದಲ್ಲಿ ಐದು ದಿವಸಗಳು ಕಳೆಯುವ ವೇಳೆಗೆ ಸುಮಾರು ಐವತ್ತು ರೂಪಾಯಿಗಳು ಖರ್ಚಾದುವು. ಆ ವೇಳೆಗೆ ಖಾಯಿಲೆಯೂ ವಾಸಿಯಾಯಿತು. ಇನ್ನು ಮುಂದೆ ಭಾರತದ ಬಡ ವಿದ್ಯಾರ್ಥಿಗಳು ಅನ್ಯದೇಶಗಳಲ್ಲಿ ವ್ಯಾಸಂಗಕ್ಕಾಗಿ ಹೋಗಿ ಸ್ವಂತವಾಗಿ ಸಂಪಾದಿಸಿ ಕೊಂಡು ಓದುವಹಾಗೆಯೇ ತಾನೂ ಮಾಡಬೇಕು; ಇಲ್ಲದಿದ್ದರೆ ಏಕಾ ದಶಿಯೇ ಸರಿ ಎಂದು ಪಾರ್ವತೀಬಾಯಿಗೆ ತೋರಿತು. ಈಕೆಯ ಹತ್ತಿರ ಉಳಿದಿದ್ದ ಹಣವು ಒಂದೂವರೆ ತಿಂಗಳಿಗೆ ಸಾಲುವಂತಿತ್ತು. ಆಮೇ ಲೇನು? ಎಷ್ಟೇ ಬಡತನವಾದರೂ ನಮ್ಮ ಜನರಲ್ಲಿರುವಷ್ಟು ಅತಿಥಿ ಸತ್ಕಾರ ಬುದ್ಧಿಯು ಪಾಶ್ಚಾತ್ಯರಲ್ಲಿ ಕಾಣುವುದಿಲ್ಲ, ಭಾರತದೇಶದಿಂದ ಹೋದವರು ಅಲ್ಲಿ ಗತಿಯಿಲ್ಲದೆ ಬಡತನದಿಂದ ಸಾಯುವ ಸ್ಥಿತಿ ಬಂದರೆ ಅಂಥವರನ್ನು ಬ್ರಿಟಿಷರು ಅಲ್ಲಿಯ "ಅಮೆರಿಕೆಯ ಬಡತನದ ಕಾನೂನು" ಪ್ರಕಾರ ಭಾರತದೇಶಕ್ಕೆ ಹಿಂದಿರುಗಿಸಿ, ಆ ಪ್ರಯಾಣದ ವೆಚ್ಚವನ್ನು ಭಾರತದಲ್ಲಿ ಅವರ ಬಂಧು ಮಿತ್ರರಿಂದ ಸಂಗ್ರಹಿಸುತ್ತಾರಂತೆ. ಹೀಗೆ ಅವಮಾನಪಡುವ ಬದಲು ಸಾಯುವುದೇ ಲೇಸಲ್ಲವೇ? ದೇವರ ದಯೆ ಯಿಂದ ತನಗೆ ಆ ಗತಿ ಬರದೆ ಇರಲೆಂದು ಪಾರ್ವತೀಬಾಯಿಯು ದೇವ ರನ್ನು ಪ್ರಾರ್ಥಿಸಿಕೊಂಡಳು.

ಭಗವಂತನ ಕೃಪೆಯಿಂದ ಈಕೆಗೆ ಆರೋಗ್ಯವುಂಟಾಯಿತು. ಒಂದುವೇಳೆ ಖಾಯಿಲೆಯು ಹೆಚ್ಚಾಗಿ ಪ್ರೊ|| ಕೋಸಾಂಬಿಯವರ ಹೇಳಿಕೆಯಂತೆ ಪಾರ್ವತೀಬಾಯಿಯು ಇಷ್ಟರಲ್ಲಿಯೇ ಹಿಂತಿರುಗುವಂತಾ

ಗಿದ್ದರೆ ಆಗ ಈಕೆಯ ಪ್ರಯಾಣಕ್ಕೆ ಅಡ್ಡಮಾತಾಡಿ "ಈ ಮುದುಕಿಯು ಅಲ್ಲಿ ಸಾಯುವುದಕ್ಕೆ ಹೋಗಬೇಕೆ?" ಎಂದು ಭವಿಷ್ಯ ನುಡಿದವರ ಮಾತು ನಿಜವಾಗಿ, ಅಪಹಾಸ್ಯಕ್ಕೆ ಗುರಿಯಾಗಬೇಕಾಗಿತ್ತು. ಅಲ್ಲದೆ ತನಗೆ ಇಷ್ಟವಾದ ವಿಧವಾ ಆಶ್ರಮಕ್ಕಾಗಿ ಯಾವ ಕೆಲಸವನ್ನೂ ಸಾಧಿಸಿ ದಂತಾಗುತ್ತಿರಲಿಲ್ಲ ಎಂಬ ಚಿಂತೆಯು ತಪ್ಪಿತು. ಮುಂದೆ ಜೀವನ ಜರು ಗುವುದು ಹೇಗೆ ಎಂಬ ಆತಂಕವು ಪ್ರಬಲವಾಯಿತು. ಕ್ರೈಸ್ತ ತರುಣಿ ಯರ ಸಂಘದ ಕಾರ್ಯದರ್ಶಿಯವರನ್ನು ತನಗೆ ಯಾವುದಾದರೂ ಕೆಲಸ ಮಾಡಿಸಿಕೊಡಿರೆಂದು ಕೇಳಿಕೊಂಡಳು.

ಇಂಗ್ಲಿಷ್ ಮಾತನಾಡಲು ಸರಿಯಾಗಿ ಬಾರದ ಆಕೆಯು ಆ ದೇಶ ದಲ್ಲಿ ಯಾವ ಕೆಲಸ ಮಾಡಬಲ್ಲಳು? ಮನೆಯ ಕೆಲಸಗಳನ್ನಲ್ಲದೆ ಮತ್ತೇನೂ ಮಾಡುವಂತಿಲ್ಲ. ಆ ಕೆಲಸದಲ್ಲಿಯೂ ನಮ್ಮ ದೇಶದ ಪದ್ಧ ತಿಗೂ ಅವರ ಪದ್ಧತಿಗಳಿಗೂ ಎಷ್ಟೋ ವ್ಯತ್ಯಾಸ. ಆದ್ದರಿಂದ ತಾನು ಕೆಲಸಕ್ಕೆ ಸೇರಬೇಕಾದರೆ ಆ ದೇಶದಲ್ಲಿ ಮನೆಗೆಲಸಗಳನ್ನು ಹೇಗೆ ಮಾಡುತ್ತಾರೆಂಬುದನ್ನು ತಿಳಿದುಕೊಳ್ಳಬೇಕಷ್ಟೆ. ಅದಕ್ಕಾಗಿ ಪಾರ್ವತೀ ಬಾಯಿಯು ತಾನಿದ್ದ ಸಂಘದ ಭವನದ ಕೆಲಸದವಳು ಮಾಡುವ ಎಲ್ಲ ಕೆಲಸಗಳನ್ನೂ ಅವಳ ಹತ್ತಿರವೇ ಇದ್ದು ನೋಡುತ್ತಿದ್ದಳು. ಅಲ್ಲದೆ ಕಾರ್ಯದರ್ಶಿಯ ಕೊಠಡಿಗಳನ್ನು ಗುಡಿಸುವುದು, ಹಾಸಿಗೆ ಹಾಸುವುದು, ಕುರ್ಚಿಮೇಜುಗಳ ಧೂಳು ಒರೆಸುವುದು ಈ ಕೆಲಸಗಳನ್ನೆಲ್ಲ ತಾನೆ ಮಾಡು ತ್ತಿದ್ದಳು. ಪಾರ್ವತೀಬಾಯಿಯು ಹೀಗೆ ತನ್ನ ಕೆಲಸವನ್ನು ತುಂಬ ಅಕ್ಕರೆ ಯಿಂದ ಮಾಡುತ್ತಿದ್ದುದರಿಂದ ಕಾರ್ಯದರ್ಶಿಗೆ ಈಕೆಯಲ್ಲಿ ಮತ್ತಷ್ಟು ವಿಶ್ವಾಸವುಂಟಾಗಿ, ಈಕೆಗೆ ಎಷ್ಟೋ ಹೊಸ ವಿಷಯಗಳನ್ನು ತಿಳುಹಿ ಸಿದರು. ಅಲ್ಲದೆ ಆಕೆಗೆ ಒಂದು ಕೆಲಸವನ್ನು ಸಹ ಹುಡುಕಿಕೊಟ್ಟರು.

ಈಕೆಗೆ ಕೆಲಸ ದೊರೆತುದು ಹತ್ತಿರದ ಓಕ್‌ಲೆಂಡಿನಲ್ಲಿದ್ದ "ಮಿಷ ನರಿ ಪೆನ್ಷನರ್ಸ್ ಹೋಮ್ ಆಫ್ ಪೀಸ್" (ವಿಶ್ರಾಂತ ಮಿಷನರಿ ಶಾಂತಿ ಮಂದಿರ) ಎಂಬಲ್ಲಿ. ಕೆಲಸಕ್ಕೆ ಸೇರುವುದಕ್ಕೆ ಹೋದಾಗ ಕ್ರೈಸ್ತ ತರುಣಿ ಯರ ಸಂಘದ ಕಾರ್ಯದರ್ಶಿಯವರೂ ಪಾರ್ವತೀಬಾಯಿಯ ಸಂಗಡ ಹೋಗಿ ಆಕೆಯನ್ನು ಆ ವಿಶ್ರಾಂತಮಂದಿರದ ಅಧ್ಯಕ್ಷರ ವಶಕ್ಕೆ ಒಪ್ಪಿಸಿ

ದರು. ಅಧ್ಯಕ್ಷರು ಇಂಡಿಯದ ಮಹರಾಷ್ಟ್ರದಲ್ಲಿ ಕೆಲವು ಕಾಲ ಕೆಲಸ ಮಾಡಿದ್ದವರಾದ್ದರಿಂದ ಅಹಮದ್‌ನಗರ ಮುಂತಾದೆಡೆಗಳ ಮಿಷನರಿ ಕೆಲಸಗಳು ಹೇಗೆ ಜರುಗುತ್ತಿವೆಯೆಂದೂ, ಪಂ|| ರಮಾಬಾಯಿಯವರ ಕೆಲಸಗಳು ಹೇಗೆ ಜರುಗುತ್ತಿವೆಯೆಂದೂ ಕೇಳಿ ವರ್ತಮಾನಗಳನ್ನು ಪಾರ್ವತೀಬಾಯಿಯಿಂದ ತಿಳಿದುಕೊಂಡರು. ಕಡೆಗೆ ಅವರು " ಹಿಂದೆ ಪಂ|| ರಮಾಬಾಯಿಯವರನ್ನು ವಿದ್ಯಾಭ್ಯಾಸಕ್ಕಾಗಿ ಇಲ್ಲಿಗೆ ಕರೆತಂದ ಏಸುವೇ ಈಗ ನಿಮ್ಮನ್ನೂ ಕರೆಯಿಸಿರುವನು. ಆಕೆಯಂತೆ ನಿಮ್ಮನ್ನೂ ಆತನೇ ಕಾಪಾಡುತ್ತಾನೆ" ಎಂದು ಆಶೀರ್ವದಿಸಿ ಪಾರ್ವತೀಬಾಯಿಯನ್ನು ಕೆಲಸಕ್ಕೆ ತೆಗೆದುಕೊಂಡರು.

# ೧೬. ವಿಶ್ರಾಂತ ಮಿಷನರಿಗಳ ಶಾಂತಿ ಮಂದಿರದಲ್ಲಿ

"ವಿಶ್ರಾಂತ ಮಿಷನರಿ ಶಾಂತಿ ಮಂದಿರ" ದಲ್ಲಿ ವಾಸಿಸುವವರು ಸಾಮಾನ್ಯವಾಗಿ ಅನೇಕ ವರ್ಷಗಳು ಅನ್ಯದೇಶಗಳಲ್ಲಿ ಮಿಷನರಿ ಕೆಲಸ ಮಾಡಿ, ಮುಪ್ಪಿನಲ್ಲಿ ವಿಶ್ರಾಂತ ಜೀವನವನ್ನು ಅನುಭವಿಸಲು ಬರುವವರು. ಅಲ್ಲಿ ಪಾರ್ವತೀಬಾಯಿಯ ಕೆಲಸವೇನೆಂದರೆ ಪ್ರಾರ್ಥನಾ ಮಂದಿರ, ಊಟದ ಮನೆ, ಮತ್ತು ಪುಸ್ತಕ ಭಂಡಾರಗಳನ್ನು ಶುಚಿ ಮಾಡುವುದು, ಊಟದ ತಟ್ಟೆಗಳನ್ನು ತೊಳೆಯುವುದು. ಅಮೆರಿಕನ್ನರು ಊಟದ ಪ್ರತಿಯೊಂದು ಪದಾರ್ಥಕ್ಕೂ ಬೇರೆ ತಟ್ಟೆಗಳನ್ನು ಉಪಯೋಗಿಸುವರು. ಆದ್ದರಿಂದ ಒಂದು ದಿನಕ್ಕೆ ಸುಮಾರು ೪೦೦ ತಟ್ಟೆಗಳನ್ನು ತೊಳೆಯಬೇಕಾಗಿತ್ತು. ಹೀಗೆ ಪಾರ್ವತೀಬಾಯಿಯು ಬೆಳಗಿನಿಂದ ಸಂಜೆಯವರೆಗೂ ಬಿಡುವಿಲ್ಲದೆ ಕೆಲಸಮಾಡಬೇಕಾಗಿತ್ತು. ಅಲ್ಲಿ ಈಕೆಗೆ ಪ್ರತ್ಯೇಕವಾದ ಕೊಠಡಿಯನ್ನು ಕೊಟ್ಟಿದ್ದುದಲ್ಲದೆ ತನಗೆ ಬೇಕಾದ ಅಡುಗೆಯನ್ನು ಮಾಡಿಕೊಳ್ಳುವುದಕ್ಕೂ ಅನುಕೂಲಪಡಿಸಿ ಕೊಟ್ಟಿದ್ದರು.

ತಮ್ಮ ಆಯುಷ್ಯದ ಮುಕ್ಕಾಲು ಭಾಗಕ್ಕಿಂತ ಹೆಚ್ಚಾಗಿಯೇ ಬೋಧನೆಯಿಂದ ಅನ್ಯ ಮತದವರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಉದ್ಯೋಗದಲ್ಲಿಯೇ ಕಾಲಕಳೆಯುತ್ತಿದ್ದ ಮಿಷನರಿಗಳು ಈಗ ಪಾರ್ವತೀಬಾಯಿಯ ಮೇಲೆಯೂ ತಮ್ಮ ಪ್ರಭಾವವನ್ನು ಬೀರತೊಡಗಿದರು. ಈಕೆಯು ಕೆಲಸಮಾಡುತ್ತಿದ್ದಾಗ ಪದೇ ಪದೇ ಒಬ್ಬೊಬ್ಬರಾಗಿ ಬಂದು "ನೀನು ಕ್ರಿಸ್ತನನ್ನು ನಂಬು. ನಿನ್ನನ್ನೂ ನಿಮ್ಮ ದೇಶವನ್ನೂ ಉದ್ಧಾರ ಮಾಡಿಕೊಳ್ಳಲು ಆತನನ್ನು ನಂಬದಿದ್ದರೆ ಗತ್ಯಂತರವೇ ಇಲ್ಲ" ಎಂದು ಬೋಧಿಸತೊಡಗಿದರು. ಅವರೆಲ್ಲರಿಗೂ ಪಾರ್ವತೀಬಾಯಿಯು "ನನಗೆ ಮೊದಲು ಇಂಗ್ಲಿಷ್ ಭಾಷೆಯನ್ನು ಕಲಿಸಿರಿ. ಅನಂತರ ನಾನು ನಿಮ್ಮ ನಮ್ಮ ಮತಗಳನ್ನು ಹೋಲಿಸಿ ಯಾವುದು ಸತ್ಯವಾಗಿ ಕಂಡರೆ ಅದನ್ನು ಅವಲಂಬಿಸುತ್ತೇನೆ" ಎಂಬ ಒಂದೇ ಜವಾಬನ್ನು ಹೇಳುತ್ತಿದ್ದಳು. ಈ ಉತ್ತರದ ಪರಿಣಾಮವಾಗಿ ಒಬ್ಬ ಮುದುಕಿಯು ಪಾರ್ವತೀಬಾಯಿಗೆ

ಇಂಗ್ಲಿಷ್ ಬೈಬಲ್ (ಕ್ರಿಸ್ತಮತ ಗ್ರಂಥ) ಓದುವುದಕ್ಕೆ ಹೇಳಿಕೊಡಲುಪಕ್ರಮಿಸಿದಳು. ಈಗ ಪಾರ್ವತೀಬಾಯಿಗೆ ಬಹಳ ಕಳವಳವುಂಟಾಯಿತು. ಈ ಮಿಷನರಿ ಶಾಂತಿಮಂದಿರವು ಆಕೆಯ ಪಾಲಿಗೆ 'ಘೋರಮಂದಿರ'ವಾಯಿತು. ತಾನೊಂದು ನೆನೆದರೆ ದೈವವೊಂದು ಬಗೆಯಿತು ಎಂಬಂತಾಯಿತು. ವಿದ್ಯೆ ಕಲಿಯುವುದಕ್ಕೆ ಬಂದ ಪಾರ್ವತೀಬಾಯಿಯನ್ನು ಜಾತಿಕೆಡಿಸುವುದಕ್ಕೆ ಆ ಮಿಷನರಿಗಳು ಹವಣಿಸಿದರು. ಎಂಥ ಪ್ರಸಂಗವೊದಗಿದರೂ ತನ್ನ ಮತವನ್ನು ಬಿಡಬಾರದೆಂದು ಆಕೆಯು ಧೃಢಮಾಡಿಕೊಂಡಳು. ಹೀಗೆ ಕಳವಳಗೊಂಡ ಪಾರ್ವತೀಬಾಯಿಯು ಪ್ರತಿ ಸಾಯಂಕಾಲವೂ ಕೆಲಸ ತೀರಿಸಿಕೊಂಡು ತನ್ನ ಕೋಣೆಗೆ ಸೇರಿದ ಮೇಲೆ ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯವನ್ನು ಬಹಳ ಭಕ್ತಿಯಿಂದ ಪಾರಾಯಣ ಮಾಡುವುದು; "ಸರ್ವಾಂತರ್ಯಾಮಿಯಾದ ಶ್ರೀಕೃಷ್ಣಾ! ನನ್ನನ್ನು ಈ ವಿಪತ್ತಿನಿಂದ ಪಾರುಗಾಣಿಸಲು ಈ ದೂರದೇಶದಲ್ಲಿ ನೀನಲ್ಲದೆ ಮತ್ತಾರು ದಿಕ್ಕು? ದಯಾಮಯನೇ! ನಿನ್ನ ಅಪಾರವಾದ ಕರುಣಾಕಟಾಕ್ಷದಿಂದ ನನ್ನನ್ನು ಕಾಪಾಡು" ಎಂದು ಪರಮಭಕ್ತಿಯಿಂದ ಸ್ತೋತ್ರಮಾಡಿ ಮಲಗುತ್ತಿದ್ದಳು. ಹೀಗೆ, ಆ ಮಿಷನರಿ ಶಾಂತಿ ಮಂದಿರದಲ್ಲಿ ಹತ್ತು ದಿವಸಗಳನ್ನು ಬಹಳ ಅಶಾಂತಿಯಿಂದ ಕಳೆದುದಾಯಿತು. ಈಗ ಪಾರ್ವತೀಬಾಯಿಗೆ ದೇಹಸ್ಥಿತಿ ಚೆನ್ನಾಗಿತ್ತು. ಈಕೆಯ ವಾಸ ಮತ್ತು ಊಟದ ಏರ್ಪಾಡುಗಳೆಲ್ಲವೂ ಸಮರ್ಪಕವಾಗಿಯೇ ಇದ್ದರೂ, ಮನಸ್ಸು ಮಾತ್ರ ನೆಮ್ಮದಿಯನ್ನು ಹೊಂದಲು ಅವಕಾಶವಿಲ್ಲದಾಯಿತು. ಜೇಡನಗೂಡಿನಲ್ಲಿ ಸಿಕ್ಕಿ ಒದ್ದಾಡುವ ನೊಣದಂತೆ ಆಯಿತು ಪಾರ್ವತೀಬಾಯಿಯ ಅವಸ್ಥೆ. ಆದರೆ ದೇವರು ಅಲ್ಲಿಂದ ತಪ್ಪಿಸಿಕೊಳ್ಳುವ ಒಂದು ದಾರಿಯನ್ನು ಆಕೆಗೆ ತೋರಿಸಿದನು.

ಪೂಣೆಯ ವಿಧವಾಶ್ರಮದಲ್ಲಿ ಪಾಠ ಹೇಳುತ್ತಿದ್ದ ಪ್ರೊ|| ಚಿಪ್ಲೂನ್‌ಕರ್ ಎಂಬುವವರು ಅಮೆರಿಕೆಯಲ್ಲಿ ತಮಗೆ ಪರಿಚಿತರಾಗಿದ್ದ ಡಾ|| ಕೊಕಟನೂರರವರ ವಿಳಾಸವನ್ನು ಪಾರ್ವತೀಬಾಯಿಗೆ ಕೊಟ್ಟಿದ್ದರು. ಅದರ ಸಹಾಯದಿಂದ ಪಾರ್ವತೀಬಾಯಿಯು ದೇವರಮೇಲೆ ಭಾರ ಹಾಕಿ ಡಾ|| ಕೊಕಟನೂರರಿಗೆ ತನ್ನ ಗೋಳನ್ನು ವಿವರಿಸಿ ಅಲ್ಲಿಂದ ತನ್ನನ್ನು

ಹೇಗಾದರೂ ಪಾರುಗಾಣಿಸಬೇಕೆಂದು ಕಾಗದ ಬರೆದುಕೊಂಡಳು. ಆ ಕಾಗದದಿಂದ ಅಷ್ಟಾಗಿ ಸಹಾಯುವಾಗುವುದೆಂಬ ನಂಬಿಕೆಯು ಆಕೆಗೆ ಇರಲಿಲ್ಲ. ಆದರೆ ಮುಳುಗುವ ಮನುಷ್ಯನು ಕೈಗೆ ಸಿಕ್ಕಿದ ಹುಲ್ಲು ಕಡ್ಡಿಯನ್ನೂ ಭ್ರಾಂತಿಯಿಂದ ಹಿಡಿದುಕೊಳ್ಳುವಂತೆ ಆಕೆಯು ಕಾಗದ ಬರೆದುಕೊಂಡಿದ್ದಳು.

ಡಾ|| ಕೊಕಟನೂರರು 'ನಯಾಗರಾ' ಜಲಪಾತದ ಒಂದು ಭಾರಿ ಕಾರ್ಖಾನೆಯಲ್ಲಿ ಕೆಲಸದಲ್ಲಿದ್ದರು. ಅವರು ಪಾರ್ವತೀಬಾಯಿಯು ಕಾಗದವನ್ನು ನ್ಯೂಯಾರ್ಕ್ ನಗರದಲ್ಲಿ ಲಾಲಾ ಲಜಪತರಾಯರು ಹೊರಡಿಸುತ್ತಿದ್ದ "ಯಂಗ್ ಇಂಡಿಯಾ" ಪತ್ರಿಕೆಯ ಕಛೇರಿಗೆ ಕಳುಹಿಸಿದರು. "ಯಂಗ್ ಇಂಡಿಯಾ" ಕಛೇರಿಯ ಡಾ|| ಹಾರ್ಡೀಕರರು ಈ ಕಾಗದವನ್ನು ಕಂಡ ಕೂಡಲೇ ಸ್ಯಾನ್‌ಫ್ರಾನ್ಸಿಸ್ಕೋ ಮತ್ತು ಬರ್ಕಲಿ ಪಟ್ಟಣಗಳಲ್ಲಿ ವಾಸವಾಗಿದ್ದ ಭಾರತೀಯ ವಿದ್ಯಾರ್ಥಿಗಳು, ವರ್ತಕರು ಮತ್ತು 'ಥಿಯಾಸಫಿಸ್ಟ್' ಗಳಿಗೆಲ್ಲ "ಕಷ್ಟದಲ್ಲಿ ಸಿಲುಕಿರುವ ಈ ಹಿಂದೂ ಮಹಿಳೆಗೆ ಸಹಾಯುವನ್ನು ನೀಡಿ" ರೆಂದು ತಂತಿ ವರ್ತಮಾನವನ್ನು ಕಳುಹಿಸಿದರು. ಈ ತಂತೀ ವರ್ತಮಾನದ ಪರಿಣಾಮವಾಗಿ ಒಂದು ಶನಿವಾರ ರಾತ್ರಿ ಹತ್ತುಘಂಟೆಯ ಸಮುಯದಲ್ಲಿ "ಭಾರತದಿಂದ ಬಂದಿರುವ ಪಾರ್ವತೀಬಾಯಿ ಎಂಬುವರು ನಿಮ್ಮಲ್ಲಿರುವರೇ?" ಎಂದು ಶಾಂತಿ ಮಂದಿರದ ಟೆಲಿಫೋನ್‌ನಲ್ಲಿ ಒಂದು ಪ್ರಶ್ನೆ ಕೇಳಿಬಂತು. ಅದಕ್ಕೆ "ನಾಳೆ ಮಧ್ಯಾಹ್ನ ಬಂದರೆ ಆಕೆಯನ್ನು ಕಾಣಬಹುದು" ಎಂಬ ಉತ್ತರ ಕೊಡಲಾಯಿತು.

ಈ ಸಮಾಚಾರವನ್ನು ಕೇಳಿದ ಪಾರ್ವತೀಬಾಯಿಗೆ ಪುನರ್ಜೀವ ಬಂದಂತಾಯಿತು. ನಾಳೆ ತನ್ನನ್ನು ಕಾಣಲು ಬರುವ ಭಾರತೀಯ ವಿದ್ಯಾರ್ಥಿಗಳ ಸಂಗಡ ತಾನು ಹೋಗಿ ಕ್ಷೇಮವಾಗಿರಬಹುದು........ ಇತ್ಯಾದಿ ಊಹಾಪ್ರಪಂಚದಲ್ಲಿ ಆ ದಿನವನ್ನೆಲ್ಲ ಕಳೆದಳು. 'ಎಂದೆಂದಿಗೂ ಮರೆಯಲಾಗದ' ಆ ಭಾನುವಾರದ ಬೆಳಿಗ್ಗೆ ಪಾರ್ವತೀಬಾಯಿಯು ಸಡಗರದಿಂದ ಎದ್ದು ಎಲ್ಲ ಕೆಲಸಗಳನ್ನೂ ಬೇಗಬೇಗ ತೀರಿಸಿಕೊಂಡು ಹನ್ನೊಂದು ಘಂಟೆಯ ಹೊತ್ತಿಗಾಗಲೆ ಕೈಸಾಲೆಯಲ್ಲಿ ತನಗಾಗಿ ಬರುವ

ವಿದ್ಯಾರ್ಥಿಗಳನ್ನು ಇದಿರುನೋಡುತ್ತ ಕುಳಿತಳು. ಹನ್ನೆರಡು ಘಂಟೆಯ ವೇಳೆಗೆ ಪ್ರಸನ್ನವದನರಾದ ಮೂವರು ಭಾರತೀಯ ಯುವಕರು ಬಂದರು. ಅವರನ್ನು ಕಂಡು ಪಾರ್ವತೀಬಾಯಿಗುಂಟಾದ ಸಂತೋಷ ವನ್ನು ಹೇಳಿತೀರದು. ತ್ರಿಮೂರ್ತಿಗಳೇ ತನ್ನ ಉದ್ಧಾರಕ್ಕಾಗಿ ಅವತರಿ ಸಿದರೆಂದು ಆಕೆಯು ಬಗೆದಳು. ಅವರನ್ನು ಕಾಣುತ್ತಲೇ ಪಾರ್ವತೀ ಬಾಯಿಯ ಕಣ್ಣುಗಳು ಕಂಬನಿಗರೆದುವು. ಈ ವಿದ್ಯಾರ್ಥಿಗಳು ಪುಣೆ ಮತ್ತು ಬೊಂಬಾಯಿ ಕಡೆಯವರಾದ್ದರಿಂದ ಪಾರ್ವತೀಬಾಯಿಯೊಂದಿಗೆ ತಮ್ಮ ಮಮತೆಯ ಮರಾಠಿ ಭಾಷೆಯಲ್ಲಿ ತೃಪ್ತಿಯಾಗಿ ಮಾತನಾಡಿ ಆಕೆ ಯನ್ನು ತಮ್ಮೊಂದಿಗೆ ಬರಬೇಕೆಂದು ಬಲವಂತ ಮಾಡಿದರು. ಅನ್ಯದೇಶ ಗಳಲ್ಲಿನ ಭಾರತೀಯ ವಿದ್ಯಾರ್ಥಿಗಳ ಆರ್ಥಿಕ ದುಃಸ್ಥಿತಿಯನ್ನು ತಿಳಿದಿದ್ದ ಪಾರ್ವತೀಬಾಯಿಯು ಅವರ ಸಂಗಡ ಹೋಗಿ ಅವರಿಗೆ ಭಾರವಾಗಿ ಇರುವುದಕ್ಕೆ ಒಪ್ಪಲಿಲ್ಲ. ಆದರೆ ಆ ವಿದ್ಯಾರ್ಥಿಗಳ ಬಲಾತ್ಕಾರವು ಹೆಚ್ಚಾದುದರಿಂದ ಕೊನೆಗೆ ಸಮ್ಮತಿಸಬೇಕಾಯಿತು. ಅಂತೂ "ಮಿಷ ನರಿ ಶಾಂತಿಮಂದಿರ" ದವರೆಲ್ಲರಿಗೂ ಕೃತಜ್ಞತಾವಂದನೆಗಳನ್ನು ಹೇಳಿ ಪಾರ್ವತೀಬಾಯಿಯು ಭಾರತೀಯ ವಿದ್ಯಾರ್ಥಿಗಳೊಂದಿಗೆ ಬೆರ್ಲಿ ಯಲ್ಲಿ ಕೆಲವು ದಿನಗಳನ್ನು ಕಳೆಯಬಹುದೆಂದು ಪ್ರಯಾಣಮಾಡಿದಳು.

## ೧೭. ಭಾರತೀಯ ವಿದ್ಯಾರ್ಥಿಗಳೊಂದಿಗೆ ವಾಸ.

ತನ್ನ ದೇಶದವರಾದ ಆ ವಿದ್ಯಾರ್ಥಿಗಳೊಂದಿಗೆ ವಾಸವಾಗಿರಲು ಪಾರ್ವತೀಬಾಯಿಯು ಬಹಳ ಸಂತೋಷದಿಂದ ಅವರಿದ್ದ ಬರ್ಕಲಿ ಪಟ್ಟಣಕ್ಕೆ ಹೊರಟಳು. ಆ ಪಟ್ಟಣದ ನಿರ್ಮಲ ಪ್ರದೇಶವೊಂದರಲ್ಲಿ ಇವರು ಒಂದು ಮಹಡಿಯ ಮನೆಯ ಕೆಳಗಿನ ಅಂತಸ್ತನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ಮಹಡಿಯ ಮೇಲೆ ಒಬ್ಬ ಅಮೆರಿಕನ್ ಕುಟುಂಬಿಗಳಿದ್ದರು. ಅಮೆರಿಕೆಯ ಇತರ ಭಾಗಗಳಲ್ಲಿರುವಷ್ಟು ಛಳಿಯು ಕ್ಯಾಲಿಫೋರ್ನಿಯಾದಲ್ಲಿಲ್ಲದುದರಿಂದ ಭಾರತೀಯ ವಿದ್ಯಾರ್ಥಿಗಳಿಗೆ ಈ ಸ್ಥಳವು ಅನುಕೂಲವಾಗಿರುವುದು.

ಈ ಮೂವರು ವಿದ್ಯಾರ್ಥಿಗಳೂ ಪಾರ್ವತೀಬಾಯಿಯನ್ನು ತಮ್ಮ ತಾಯಿಯಂತೆಯೇ ಭಾವಿಸಿ ಬಹಳ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದರು. ಆಕೆಯೂ ಅವರನ್ನು ಬಹಳ ಆದರದಿಂದ ನೋಡುತ್ತ ಅವರ ಹೊತ್ತಿಗೆ ಸರಿಯಾಗಿ ಊಟ ಉಪಚಾರಗಳನ್ನು ನಡೆಸುತ್ತಿದ್ದಳು. ಆ ಮೂವರ ಪೈಕಿ ಕೇಶವರಾವ್ ಎಂಬಾತನೇ ಅಮೆರಿಕೆಗೆ ಮೊದಲು ಬಂದವನು. ಈತನು ಭಾರತ ದೇಶದ ಒಂದು ವೃತ್ತಿಶಿಕ್ಷಣಾಲಯದ ಪರೀಕ್ಷೆಯನ್ನು ಮುಗಿಯಿಸಿಕೊಂಡು ಹೆಚ್ಚು ವ್ಯಾಸಂಗಕ್ಕೆಂದು ಅಮೆರಿಕೆಗೆ ಬಂದುದು. ಆದರೆ ತನ್ನವರಿಂದ ಒದಗುತ್ತಿದ್ದ ಹಣಸಹಾಯವು ಹೋಗಲಾಗಿ ಗತ್ಯಂತರವಿಲ್ಲದೆ ಮುಂದೆ ಓದಲಾಗದೆ ಕೆಲಸಕ್ಕೆ ಸೇರಿಕೊಂಡನು. ಅಂತು ತಾನು ಅಮೆರಿಕೆಗೆ ಬಂದು ಹತ್ತು ವರ್ಷಗಳಾದಾಗ್ಗೂ ತನ್ನ ಉದ್ದೇಶವನ್ನು ಸಾಧಿಸಲಾರದೆ ಈಗ ಒಂದು ಕಾರ್ಖಾನೆಯಲ್ಲಿ ತಿಂಗಳೊಂದಕ್ಕೆ ೧೫೦ ಡಾಲರುಗಳ ಸಂಬಳದ ಮೇಲಿದ್ದನು.

ದಾಮೋದರ್ ಎಂಬಾತನೂ ಪ್ರೌಢ ವ್ಯಾಸಂಗಕ್ಕಾಗಿ ಅಮೆರಿಕೆಗೆ ಬಂದವನೆ. ತನ್ನ ಬಂಧುಗಳಿಂದ ಯಾವ ಸಹಾಯವೂ ಇಲ್ಲದೆ ಹೋಗಲು ಇಲ್ಲಿ ಜೀವನ ಸಾಗಿಸುವುದೇ ಕಷ್ಟವಾಗಿ ಪದೇ ಪದೇ ಕಾಲೇಜನ್ನು ಬಿಟ್ಟು ಕೆಲಸ ಹುಡುಕಿಕೊಂಡು ತಿರುಗಬೇಕಾಗಿತ್ತು.

ವಾಸುದೇವ್ ಎಂಬುವವನು ಇಂಡಿಯದ ಒಂದು ಕಾಲೇಜಿನ ಗಣಿತ ಶಾಸ್ತ್ರಾಧ್ಯಾಪಕನಾಗಿದ್ದು ಪ್ರೌಢ ವ್ಯಾಸಂಗಕ್ಕೆಂದು ಬಂದವನು. ಆತನಿಗೂ ತಕ್ಕ ಸಹಾಯ ದೊರೆಯದೆ ಕಷ್ಟಪಡುತ್ತಿದ್ದನು. ಇವರಿಬ್ಬರಿಗೂ ಕೇಶವರಾವ್ ಸಹಾಯಮಾಡುತ್ತಿದ್ದನು. ಹೀಗೆ ಇವರೆಲ್ಲರೂ ಬಡ ಜೀವನವನ್ನು ಸಾಗಿಸುತ್ತಿದ್ದರು. ಇವರನ್ನು ನೋಡಿ ಪಾರ್ವತೀಬಾಯಿಯು ಬಹಳ ಮರುಗುತ್ತಿದ್ದಳು. ಅವರು ಬೆಳಿಗ್ಗೆ ಕಾಫಿ ಕುಡಿದು ಹೊರಟು ಹೋದರೆ ಮನೆಗೆ ಬರುವುದು ಸಾಯಂತ್ರವೇ. ಆ ವೇಳೆಗೆ ಪಾರ್ವತೀಬಾಯಿಯು ಅವರಿಗೆ ಬಿಸಿ ಅಡುಗೆಯನ್ನು ಮಾಡಿಡುತ್ತಿದ್ದಳು. ಆಗಲೂ ಪಾಪ ವಿದ್ಯಾರ್ಥಿಗಳು ಹೋಟಿಲಿನಲ್ಲಿ ಊಟಮಾಡುವಂತೆಯೇ ಅವಸರವಸರವಾಗಿ ಊಟಮಾಡಿಕೊಂಡು ಮತ್ತೆ ಕೆಲಸಕ್ಕೆ ಹೋಗಿ ಬರುತ್ತಿದ್ದರು. ಬಡತನದ ದೆಸೆಯಿಂದ ಅವರು ಸ್ವಲ್ಪವೇ ಹಾಲನ್ನು ಕೊಂಡುಕೊಳ್ಳುತ್ತಿದ್ದರು. ಅದರಲ್ಲಿಯೂ ಆ ಮೂವರೂ ಬಹಳ ಸ್ವಲ್ಪವನ್ನು ಉಪಯೋಗಿಸಿಕೊಂಡು ಉಳಿದುದನ್ನು ಪಾರ್ವತೀಬಾಯಿಯು ವಯಸ್ಸಾದವಳೆಂದು ಆಕೆಗೆ ಕೊಡುತ್ತಿದ್ದರು. ತಮ್ಮಲ್ಲಿದ್ದ ಮೂರು ಹಾಸಿಗೆಗಳಲ್ಲಿ ಆಕೆಗೆ ಒಂದನ್ನು ಕೊಟ್ಟು ಮಿಕ್ಕ ಎರಡು ಹಾಸಿಗೆಗಳಲ್ಲಿ ಮೂವರೂ ಮಲಗಿಕೊಳ್ಳುತ್ತಿದ್ದರು. ಕೇಶವರಾವ್ ಆರೋಗ್ಯವು ಸಹ ಅಷ್ಟು ಚೆನ್ನಾಗಿರಲಿಲ್ಲ. ಬಹಳ ಕಷ್ಟದಲ್ಲಿರುವ ಈತನಿಗೆ ತಾನು ಇನ್ನೂ ಭಾರವಾದೆನಲ್ಲ ಎಂದು ಪಾರ್ವತೀಬಾಯಿಯು ಕನಿಕರಗೊಂಡು ಪೇಚಾಡುತ್ತಿದ್ದಳು. ತನಗೆ ಏನಾದರೊಂದು ಕೆಲಸವನ್ನು ನೋಡಿಕೊಡಿರೆಂದು ಆಕೆಯು ಆ ವಿದ್ಯಾರ್ಥಿಗಳನ್ನು ಕೇಳಿದಳು. ಅದಕ್ಕೆ ಅವರು "ನೀವು ದಯವಿಟ್ಟು ಆ ಮಾತನ್ನಾಡಬೇಡಿ. ಯುವಕರಾದ ನಾವು ಬದುಕಿರುವಾಗ ನಿಮ್ಮನ್ನು ಚಾಕರಿಗೆ ಕಳುಹಿಸುವುದೆಂದರೆ ನಮಗೆ ನಾಚಿಕೆಯಲ್ಲವೇ! ಮೂವರಿಗೆ ನೀವೊಬ್ಬರು ಭಾರವಲ್ಲ. ಆದ್ದರಿಂದ ನೀವು ಇಲ್ಲಿ ನಿಶ್ಚಿಂತೆಯಾಗಿರಿ" ಎಂದು ಹೇಳುತ್ತಿದ್ದರು.

ಹೀಗೆ ಕೆಲವು ಕಾಲ ಕಳೆಯಿತು. ಪಾರ್ವತೀಬಾಯಿಯು ಅಡುಗೆ ಕೆಲಸಗಳನ್ನು ಪೂರೈಸಿಕೊಂಡು ವಿರಾಮಕಾಲದಲ್ಲಿ ಇಂಗ್ಲಿಷ್ ಓದಿ

ಕೊಳ್ಳುತ್ತಿದ್ದಳು. ಆ ವಿದ್ಯಾರ್ಥಿಗಳು ತನಗೆ ಇಂಗ್ಲಿಷ್ ಹೇಳಿಕೊಡ ಬಹುದೆಂದು ಆಕೆಯು ನೆನೆಸಿದ್ದಳು.

ಆದರೆ ಹಗಲೆಲ್ಲ ದುಡಿದುಬಂದ ಅವರಿಗೆ ಈಕೆಗೆ ಪಾಠ ಹೇಳಲು ಹೊತ್ತಿರಲಿಲ್ಲ. ಈ ಕಾರಣಗಳಿಂದ ಪಾರ್ವತೀಬಾಯಿಗೆ ತನ್ನನ್ನು ಪ್ರೊ|| ಕರ್ವೆಯವರು ಅಮೆರಿಕೆಗೆ ಕಳುಹಿಸಿದ ಉದ್ದೇಶವನ್ನು ಸಾಧಿಸು ವುದಕ್ಕಾದೀತೆ ಎಂಬ ಸಂಶಯವುಂಟಾಯಿತು. ಇಂಗ್ಲಿಷು ಮಾತನಾಡುವ ದೇಶದಲ್ಲಿ ಬೇಗ ಆ ಭಾಷೆಯನ್ನು ಕಲಿಯಬಹುದೆಂದುಕೊಂಡಿದ್ದ ಆಕೆಗೆ ತಾನಿದ್ದ ಮನೆಯಲ್ಲಿ ಬರಿಯ ಮರಾಠಿಯೇ ಕೇಳಿಸುತ್ತಿತ್ತು. ತನ್ನ ಮೆಚ್ಚಿನ "ವಿಧವಾಶ್ರಮ"ಕ್ಕೆ ಯಾವ ಕೆಲಸವನ್ನೂ ಸಾಧಿಸಿದಂತಾಗ ಲಿಲ್ಲ ಎಂಬ ಹಂಬಲವು ಪಾರ್ವತೀಬಾಯಿಗೆ ಹೆಚ್ಚಿತು.

ಆ ವಿದ್ಯಾರ್ಥಿಗಳಿಗೆ ಈಕೆಯು ಅಮೆರಿಕೆಗೆ ಬಂದ ಉದ್ದೇಶವು ಒಪ್ಪಿಗೆಯಾಗಲಿಲ್ಲ. ಇಷ್ಟು ವಯಸ್ಸಾದ ಪಾರ್ವತೀಬಾಯಿಯನ್ನು ಪ್ರೊ|| ಕರ್ವೆಯವರು ಏಕೆ ಅಮೆರಿಕೆಗೆ ಕಳುಹಿಸಿದರು ಎಂದು ಅವರೆನ್ನು ತ್ತಿದ್ದರು. ಇಂಥವರಿಂದ ತನ್ನ ಕೆಲಸಕ್ಕೆ ಸಹಾಯವಾಗಲಾರದೆಂದು ಪಾರ್ವತೀಬಾಯಿಯು ತಿಳಿದುಕೊಂಡಳು.

ಒಂದು ದಿವಸ ಕೇಶವರಾಯರ ಮೇಜನ್ನು ಒರೆಸುವಾಗ ಪಾರ್ವತೀಬಾಯಿಗೆ ಕೆಲವರು ಭಾರತೀಯರ ವಿಳಾಸಗಳನ್ನು ಬರೆದಿದ್ದ ಒಂದು ಪುಸ್ತಕವು ಕಾಣಿಸಿತು. ಅದರಲ್ಲಿ ನ್ಯೂಯಾರ್ಕ್ ನಗರದಲ್ಲಿದ್ದ ಪ್ರೊ|| ಗೋಖಲೆಯೆಂಬುವವರ ವಿಳಾಸವೂ ಇದ್ದಿತು ತಾನು ಅವ ರಲ್ಲಿಗೆ ಹೋದರೆ ತನ್ನ ಉದ್ದೇಶವು ನೆರವೇರಬಹುದೆಂದು ಪಾರ್ವತೀ ಬಾಯಿಗೆ ತೋರಿತು. ಕೇಶವರಾವ್ ಸಹಾಯದಿಂದ ಅವರಿಗೆ ತನ್ನ ಉದ್ದೇಶವನ್ನು ತಿಳಿಸಿ ಒಂದು ಕಾಗದ ಬರೆದಳು. ಅದಕ್ಕೆ ಪ್ರೊ|| ಗೋಖಲೆಯವರು ಬಹು ಸಂತೋಷದಿಂದ ಆಕೆಯನ್ನು ತಮ್ಮಲ್ಲಿಗೆ ಬರ ಬೇಕೆಂದು ಆಹ್ವಾನಿಸಿದರು. ಬೆರ್ಕಲಿಯಿಂದ ನ್ಯೂಯಾರ್ಕಿಗೆ ರೈಲ್ವೆ ಟಿಕೆಟ್ಟಿಗೆ ನೂರೈವತ್ತು ಡಾಲರುಗಳಾಗುತ್ತದೆ. ಪಾರ್ವತೀಬಾಯಿಯ ಕೈಯ್ಯಲ್ಲಿ ಉಳಿದಿದ್ದುದು ನೂರು ಡಾಲರುಗಳು ಮಾತ್ರ. ತನ್ನ ರೈಲು ಪ್ರಯಾಣಕ್ಕೆ ಹಣವಿಲ್ಲನೆಂದು ಮತ್ತೆ ಗೋಖಲೆಯವರಿಗೆ ತಿಳಿಸಿದಳು.

ಅದಕ್ಕೆ ಪಾಪ, ಅವರು ಬಹಳ ಔದಾರ್ಯದಿಂದ ಈಕೆಯ ಪ್ರಯಾಣಕ್ಕೆ ತಗಲುವ ಹಣವನ್ನು ಕಳುಹಿಸಿಕೊಟ್ಟರು. ಇನ್ನು ಪಾರ್ವತೀಬಾಯಿಯ ಪ್ರಯಾಣಕ್ಕೆ ಕೇಶವರಾವ್ ತಕ್ಕ ಏರ್ಪಾಡು ಮಾಡಿಕೊಟ್ಟು ಆಕೆಗೆ ಎಲ್ಲೆಲ್ಲಿ ರೈಲು ಬದಲಾಯಿಸಬೇಕೆಂಬುದನ್ನು ವಿವರಿಸಿ ರೈಲಿಗೆ ಟಿಕೆಟ್ಟು ತೆಗೆದುಕೊಟ್ಟು ಪ್ರಯಾಣಮಾಡಿಸಿದನು.

## ೧೮. ಆರು ದಿವಸಗಳ ರೈಲು ಪ್ರಯಾಣ

ಪ್ರೊ|| ಗೋಖಲೆಯವರ ಹಣ ಮತ್ತು ಕೇಶವರಾವ್ ಸಹಾಯ ಇವುಗಳಿಂದ ಪಾರ್ವತೀಬಾಯಿಯು ಅಮೆರಿಕೆಯಲ್ಲಿ ತನ್ನ ಮೊಟ್ಟ ಮೊದಲನೆಯ ರೈಲು ಪ್ರಯಾಣವನ್ನು ಮಾಡಿದಳು. ರೈಲ್ವೆ ಟಿಕೆಟ್ಟಿಗೆ ತುಂಬ ವೆಚ್ಚವಾಗುವುದರಿಂದ ಪಾರ್ವತೀಬಾಯಿಯು ತನ್ನ ಸಹಾಯಕ್ಕೆ ಯಾರನ್ನೂ ಕರೆಯುವಂತಿರಲಿಲ್ಲ.

ವಿಧವಾಶ್ರಮದ ಪ್ರಚಾರಕಾರ್ಯಕ್ಕಾಗಿ ಭಾರತದೇಶದಲ್ಲಿ ಪಾರ್ವತೀಬಾಯಿಯು ಎಷ್ಟೋ ಪ್ರಯಾಣಮಾಡಿ, ಪ್ರಯಾಣದ ಅನುಭವ ಹೊಂದಿದ್ದಳು. ಆದರೆ ಅಮೆರಿಕೆಯ ಪ್ರಯಾಣವು ತೀರಹೊಸದು. ಮುಖ್ಯವಾಗಿ ಅಲ್ಲಿಯ ಭಾಷೆ ಮತ್ತು ಸಂಪ್ರದಾಯಗಳ ತಿಳುವಳಿಕೆ ಯಿಲ್ಲದುದು ತೊಂದರೆಗೆ ಕಾರಣ. ಅದೂ ಅಲ್ಲದೆ ಕೇವಲ ಮಾಂಸಾಹಾರಿ ದೇಶಗಳಲ್ಲಿ ಅಪ್ಪಟ ಸಸ್ಯಾಹಾರಿಗಳು ತಮ್ಮ ನಿಯಮವನ್ನು ಕಾಪಾಡಿಕೊಳ್ಳುವುದಕ್ಕಾಗಿ ಪಡಬೇಕಾದ ತೊಂದರೆಗಳು ಬಹಳ. ಈ ಕಾರಣಗಳಿಂದ ರೈಲು ಪ್ರಯಾಣದಲ್ಲಿ ಪಾರ್ವತೀಬಾಯಿಯು ತುಂಬಾ ಕಷ್ಟಪಡಬೇಕಾಯಿತು. ಅಮೆರಿಕೆಯ ರೈಲುಗಳಲ್ಲಿ ಊಟಕ್ಕೆ ಪ್ರತ್ಯೇಕವಾದ ಗಾಡಿಗಳಿರುತ್ತವೆ. ಪ್ರತಿ ಬೆಳಿಗ್ಗೆಯೂ ಪಾರ್ವತೀಬಾಯಿಯು ಅಲ್ಲಿಗೆ ಹೋಗಿ ಬರಿಯ ರೊಟ್ಟಿ, ಬೆಣ್ಣೆ, ಟೀ ಇವಷ್ಟನ್ನು ಮಾತ್ರ ತೆಗೆದುಕೊಳ್ಳುತ್ತಿದ್ದಳು. ಅಷ್ಟಕ್ಕೇ ೧೨ ಆಣೆಗಳನ್ನು ಕೊಡಬೇಕಾಗಿತ್ತು. ಅನಂತರ ಮಾರನೆಯ ಬೆಳಗಿನವರೆಗೂ ಈಕೆಯು ಅಲ್ಲಿ ಏನೂ ತಿನ್ನುವಂತಿರಲಿಲ್ಲ. ತನ್ನಲ್ಲಿದ್ದ ಬಿಸ್ಕತ್ತು ಮತ್ತು ಹಣ್ಣುಗಳಿಂದಲೂ ಸಹ ಅಷ್ಟಾಗಿ ಪ್ರಯೋಜನವಾಗಲಿಲ್ಲ. ರೈಲಿನ ಹತ್ತಿರ ಮಾರುವುದಕ್ಕೆ ಬರುವ ಕಡಲೆಕಾಯಿ ಬೀಜಗಳನ್ನು ಪ್ರತಿಸಾಯಂಕಾಲವೂ ಕೊಂಡು ತಿಂದು ನೀರು ಕುಡಿದರೆ ಅದೇ ರಾತ್ರಿಯ ಊಟ. ಹೀಗೆ ಪಾರ್ವತೀಬಾಯಿಯು ತನ್ನ ಪ್ರಯಾಣದ ಆರು ದಿವಸಗಳನ್ನು ಕಳೆದಳು.

ಈ ಮಧ್ಯೆ ಈಕೆಯು ಎರಡು ಕಡೆ ರೈಲು ಬದಲಾಯಿಸಬೇಕಾಯಿತು. ರೈಲು ಬದಲಾಯಿಸುವುದು ಪಾರ್ವತೀಬಾಯಿಗೆ ಬಹಳ

ಪ್ರಯಾಸವಾಯಿತು. ತನಗೆ ಬಂದ ಅರ್ಧಂಬರ್ಧ ಇಂಗ್ಲಿಷಿನಲ್ಲಿಯೇ "ನಾನು ಭಾರತೀಯಳು. ನಿಮ್ಮ ಭಾಷೆ ತಿಳಿಯದು. ದಯವಿಟ್ಟು, ರೈಲು ಬದಲಾಯಿಸಲು ಸಹಾಯ ಮಾಡುವಿರಾ?" ಎಂದು ಸ್ಟೇಷನ್ನಿನಲ್ಲಿ ಓಡಿಯಾಡುವ ಹೆಂಗುಸರನ್ನು ಕೇಳುವುದು, ಅವರ ಸಹಾಯದಿಂದ ಬೇರೆ ರೈಲಿಗೆ ಹತ್ತುವುದು, ಹೀಗೆ ಮಾಡಿದರು.

ಅಂತು ಹೀಗೆಯೇ ಆರುದಿವಸಗಳ ರೈಲು ಪ್ರಯಾಣವನ್ನು ಮಾಡಿ ಆರನೆಯ ರಾತ್ರಿ 11½ ಗಂಟೆಗೆ ಷೆನೆಕ್ಟಡಿ ಪಟ್ಟಣವನ್ನು ತಲಪಿದ್ದಾಯಿತು. ಪ್ರೊ|| ಗೋಖಲೆಯವರು ರೈಲ್ವೆ ಷ್ಟೇಷನ್ನಿನಿಂದ ತಮ್ಮ ಮನೆಗೆ ಬರಬೇಕಾದ ದಾರಿಯ ನಕ್ಷೆಯನ್ನು ವಿವರವಾಗಿ ಪಾರ್ವತೀಬಾಯಿಗೆ ಕಾಗದದಲ್ಲಿ ಬರೆದು ಕಳುಹಿಸಿದ್ದರು. ಆದರೂ ಆ ಮಧ್ಯರಾತ್ರಿಯಲ್ಲಿ ಎಂದೂ ಕಂಡು ಕೇಳದ ಊರಿನಲ್ಲಿ ಪಾರ್ವತೀಬಾಯಿಯು ಗೋಖಲೆಯವರ ಮನೆಯನ್ನು ಹುಡುಕಿಕೊಂಡು ಹೋಗುವುದು ಹೇಗೆ? ಆಕೆಗೆ ಏನೂ ದಿಕ್ಕು ತೋರಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ ಪಾರ್ವತೀಬಾಯಿಯು ಸ್ಟೇಷನ್‌ಮಾಸ್ಟರ ಬಳಿಗೆ ಹೋದಳು. ಆತನು ಒಳ್ಳೆಯವನಂತೆ ಕಂಡನು. ಪಾರ್ವತೀಬಾಯಿಯು ತನ್ನಲ್ಲಿದ್ದ ನಕ್ಷೆಯನ್ನು ಆತನಿಗೆ ತೋರಿಸಿ, "ನಾನು ಇಲ್ಲಿಗೆ ಹೋಗಬೇಕಾಗಿದೆ. ದಯವಿಟ್ಟು ದಾರಿ ತೋರಿಸುವಿರಾ?" ಎಂದು ಕೇಳಿದಳು. ಅದಕ್ಕೆ ಆತನು ಪಾರ್ವತೀಬಾಯಿಗೆ ಎದುರಿಗಿದ್ದ ಬೆಂಚಿನಮೇಲೆ ಕುಳಿತುಕೊಳ್ಳುವಂತೆ ಸನ್ನೆ ಮಾಡಿದನು. ಹಾಗೆಯೇ ಪಾರ್ವತೀಬಾಯಿಯು ಎರಡು ಗಂಟೆಗಳ ಕಾಲ ಕುಳಿತು, "ಈತನು ಸುಮ್ಮನೆ ಹೀಗೆ ಕುಳ್ಳಿರಿಸಿದುದರ ಅರ್ಥವೇನಿರಬಹುದು" ಎಂದು ಯೋಚಿಸುತ್ತಿದ್ದಳು. ಅನಂತರ ಅಲ್ಲಿಯ ನೌಕರರಿಬ್ಬರು ಬಂದರು. ಸ್ಟೇಷನ್‌ಮಾಸ್ಟರು ತನ್ನ ನೌಕರರಿಗೆ ಪಾರ್ವತೀಬಾಯಿಯನ್ನು ಪ್ರೊ|| ಗೋಖಲೆಯವರ ಮನೆಗೆ ಕರೆದುಕೊಂಡು ಹೋಗುವಂತೆ ಹೇಳಿದನು. ಪ್ರೊ|| ಗೋಖಲೆಯವರ ಮನೆಯು ಹತ್ತಿರವೇ ಇದ್ದುದರಿಂದ ನಡೆದುಕೊಂಡೇ ಹೋದುದಾಯಿತು. ಆ ರೈಲ್ವೆ ನೌಕರರು ಗೋಖಲೆಯವರ ಮನೆಯ ಬಾಗಿಲನ್ನು ತಟ್ಟಿದರು. ಹತ್ತುನಿಮಿಷಗಳಾದರೂ ಜವಾಬೇ ಇಲ್ಲ. ಛಳಿಯು ಸಹಿಸಲಸಾಧ್ಯವಾಯಿತು. ಸಂಗಡ ಬಂದಿದ್ದ

ವರು ಬೇಗ ಹಿಂದಿರುಗಬೇಕೆಂಬ ಆತುರ ತೋರಿಸುತ್ತಿದ್ದರು. ಈಗ ಪಾರ್ವತೀಬಾಯಿಗೆ ಮನೆಯ ನಂಬರು ತಪ್ಪಿರಬಹುದೇನೋ ಇನ್ನೆಲ್ಲಿ ಹುಡುಕುವುದು ಎಂಬ ಭೀತಿಯುಂಟಾಯಿತು. ಏನಾದರೂ ಆಗಲಿ ಎಂದುಕೊಂಡು ಮತ್ತೊಮ್ಮೆ ತಾನೆ ಬಾಗಿಲು ತಟ್ಟಿದಳು. ಕೂಡಲೆ ಒಬ್ಬ ಪಾದ್ರಿಯು ಬಂದು ಬಾಗಿಲು ತೆಗೆದನು. ಅಂದು ಕ್ರಿಸ್‌ಮಸ್ ಹಬ್ಬವಾದುದರಿಂದ ಆತನು ಮೊದಲು ಪಾರ್ವತೀಬಾಯಿಗೆ ಒಂದು ಚೂರು ಕಲ್ಲುಸಕ್ಕರೆಯನ್ನು ಕೊಟ್ಟು ಯೋಗಕ್ಷೇಮವನ್ನು ವಿಚಾರಿಸಿದನು. ಪ್ರೊ|| ಗೋಖಲೆಯವರು ಮಹಡಿಯಮೇಲೆ ವಾಸವಾಗಿದ್ದುದರಿಂದ ಮೇಲಕ್ಕೆ ಹೋಗಿ ಅವರಿಗೆ ಹೇಳಿದನು. ಪ್ರೊ|| ಗೋಖಲೆಯವರು ಕೂಡಲೆ ಬಂದು ಬಹಳ ಆದರದಿಂದ ಪಾರ್ವತೀಬಾಯಿಯನ್ನು ಕರೆದುಕೊಂಡು ಹೋಗಿ ಆಕೆಗೆ ಬೇಕಾದ ಎಲ್ಲ ಅನುಕೂಲಗಳನ್ನು ಮಾಡಿಕೊಡಬೇಕೆಂದು ಹೌಸ್‌ಕೀಪರ್ ಮಿಸೆಸ್ ಸಿಕೋರ್ ಎಂಬುವವರಿಗೆ ಹೇಳಿ ಪಾರ್ವತೀಬಾಯಿಯನ್ನು ಆಕೆಗೆ ಒಪ್ಪಿಸಿದರು.

ಪಾರ್ವತೀಬಾಯಿಯು ಬರುತ್ತಿರುವ ಸಮಾಚಾರವನ್ನು ಕೇಶವರಾವ್ ಪ್ರೊ|| ಗೋಖಲೆಯವರಿಗೆ ತಂತಿಯ ಮೂಲಕ ತಿಳಿಸಿದ್ದನು. ಆದರೆ ಯಾವ ರೈಲಿನಲ್ಲಿ ಯಾವಾಗ ತಲಪುವರೆಂಬುದನ್ನು ತಿಳಿಸಿರಲಿಲ್ಲ. ಆದುದರಿಂದ ಗೋಖಲೆಯವರು ಪಾರ್ವತೀಬಾಯಿಯನ್ನು ರೈಲ್ವೆ ಸ್ಟೇಷನ್ನಿನಲ್ಲಿಯೇ ಎದುರುಗೊಳ್ಳಲು ಅನುಕೂಲಿಸದೆ ಆಕೆ ಇಷ್ಟು ತೊಂದರೆ ಪಡಬೇಕಾಯಿತು.

# ೧೯. ಷೆನೆಕ್ಟಡಿಯ ಅನುಭವ

ನ್ಯೂಯಾರ್ಕ್ ನಗರದ ಜನರಲ್ ಎಲೆಕ್ಟ್ರಿಕ್ ಸಂಸ್ಥೆಯು ಬಹಳ ದೊಡ್ಡದು. ಅಲ್ಲಿ ೨೬,೦೦೦ ಜನರು ಕೆಲಸಮಾಡುತ್ತಾರೆ. ಪ್ರೊ|| ಗೋಖಲೆಯವರು ಈ ಸಂಸ್ಥೆಯಲ್ಲಿ ಎಲೆಕ್ಟ್ರಿಕಲ್ ಎಂಜಿನಿಯರಾಗಿದ್ದರು. ಅವರು ತಮ್ಮ ವಿರಾಮಕಾಲವನ್ನು ಕೂಲಿಗಾರರ ಉದ್ಧಾರಕ್ಕಾಗಿ ವಿನಿಯೋಗಿಸುತ್ತಿದ್ದರು. ಅವರು "ನಿರುದ್ಯೋಗ" ಎಂಬ ಪುಸ್ತಕವನ್ನು ಬರೆದಿದ್ದಾರೆ.

ಪ್ರೊ|| ಗೋಖಲೆಯವರು ಬಾಡಿಗೆಗೆ ಇದ್ದ ಮನೆಯ "ಹೌಸ್ ಕೀಪರ್" ಮಿಸೆಸ್ ಸಿಕೋರ್. ಆಕೆಗೆ ಇಬ್ಬರು ಹೆಣ್ಣು ಮಕ್ಕಳೂ, ಒಬ್ಬ ಮಗ. ಪ್ರೊ|| ಗೋಖಲೆಯವರ ಕೋರಿಕೆಯಂತೆ ಮಿಸೆಸ್ ಸಿಕೋರ್, ಪಾರ್ವತೀಬಾಯಿಗೆ ಒಂದು ಕೊಠಡಿಯನ್ನು ಕೊಟ್ಟು ಆಕೆಗೆ ಬೇಕಾದ ಎಲ್ಲಾ ಸೌಕರ್ಯಗಳನ್ನೂ ಒದಗಿಸುತ್ತಿದ್ದರು. ಆಕೆಯ ಮಕ್ಕಳು ಪೇಟೆಯಿಂದ ಪಾರ್ವತೀಬಾಯಿಯ ಅಡುಗೆಗೆ ಬೇಕಾದ ಅಕ್ಕಿ ಮುಂತಾದ ಸಾಮಾನುಗಳನ್ನು ತಂದುಕೊಡುತ್ತಿದ್ದರು. ಅಮೆರಿಕನರ ಮನೆಯ ಕೆಲಸಗಳನ್ನು ತಿಳಿದುಕೊಳ್ಳಬೇಕೆಂಬ ಆಸೆಯು ಪಾರ್ವತೀಬಾಯಿಯನ್ನು ಬಾಧಿಸುತ್ತಿದ್ದುದರಿಂದ, ಮಿಸೆಸ್ ಸಿಕೋರರ ಸಹಾಯದಿಂದ ಆ ಕೆಲಸಗಳನ್ನೆಲ್ಲ ಚೆನ್ನಾಗಿ ತಿಳಿದುಕೊಂಡಳು. ಹೀಗೆ ಎರಡು ತಿಂಗಳು ಕಳೆದುವು. ಎಷ್ಟು ದಿನಗಳಾದರೂ ಒಬ್ಬರಿಗೆ ಭಾರವಾಗಿರುವುದು ಪಾರ್ವತೀಬಾಯಿಯ ಸ್ವಭಾವವಲ್ಲ. ಆದ್ದರಿಂದ ಮಿಸೆಸ್ ಸಿಕೋರರ ಸಹಾಯದಿಂದ ಒಂದು ಕೆಲಸವನ್ನು ಸಂಪಾದಿಸಿಕೊಂಡಳು.

ಮೊದಲು ಪಾರ್ವತೀಬಾಯಿಯು ಕೆಲಸಕ್ಕೆ ಸೇರಿದುದು ಒಬ್ಬ ಯಹೂದ್ಯ ಡಾಕ್ಟರರ ಮನೆಯಲ್ಲಿ. ಅಲ್ಲಿ ಈಕೆಯು ಬೆಳಗಿನಿಂದ ಮಧ್ಯಾಹ್ನ ೪ ಘಂಟೆಯವರೆವಿಗೂ ಹೇಳಿದ ಕೆಲಸಗಳನ್ನೆಲ್ಲ ಮಾಡಿದರೆ, ವಾರಕ್ಕೆ ಮೂರು ಡಾಲರು (೯ ರೂ.ಗಳು) ವೇತನ ಕೊಡುವುದಾಗಿ ಒಪ್ಪಂದವಾಯಿತು. ಆ ಮನೆಯಲ್ಲಿ ಒಂದು ವಾರ ಕೆಲಸಮಾಡಿದಳು,

ಆಮೇಲೆ ಪಾರ್ವತೀಬಾಯಿಯನ್ನು ಪ್ರೊ|| ಗೋಖಲೆಯವರು ತಮ್ಮ ಸ್ನೇಹಿತರಾದ ಆಪಲ್ಮ್ಯಾನ್ ಎಂಬುವವರ ಮನೆಯಲ್ಲಿ ಕೆಲಸಕ್ಕೆ ಸೇರಿಸಿದರು. ಅಲ್ಲಿ ಕೆಲಸ ಹಗುರವಾಗಿತ್ತು. ಇದುವರೆಗೂ ಅಮೆರಿಕೆಯ ಮಕ್ಕಳಿಗೆ ಉಡುಪನ್ನು ಹೇಗೆ ಹಾಕುವುದೆಂಬುದು ಪಾರ್ವತೀಬಾಯಿಗೆ ತಿಳಿದಿರಲಿಲ್ಲ. ಈ ಮನೆಯಲ್ಲಿ ಆರು, ಮೂರು, ಮತ್ತು ಒಂದೂವರೆ ವರ್ಷಗಳ ಮೂವರು ಮಕ್ಕಳಿದ್ದರು. ಮನೆಯ ಯಜಮಾನಿಯ ಸಹಾಯದಿಂದ ಮಕ್ಕಳಿಗೆ ಉಡುಪು ಹಾಕುವುದನ್ನು ಕಲಿತು ಪಾರ್ವತೀಬಾಯಿಯು ಅವರ ಮನೆಯಲ್ಲಿ ಮಕ್ಕಳೊಂದಿಗೆ ಬಹಳ ಸಂತೋಷವಾಗಿದ್ದಳು. ಅಲ್ಲಿ ಕೆಲವು ವಾರಗಳಿರುವುದರೊಳಗಾಗಿ ಜ್ವರ ಬಂದು ಪಾರ್ವತೀಬಾಯಿಯು ಅವರ ಮನೆಯನ್ನು ಬಿಡಬೇಕಾಯಿತು.

ಮತ್ತೆ ಮಿಸೆಸ್ ಸಿಕೋರರ ಸಹಾಯದಿಂದ ಪಾರ್ವತೀಬಾಯಿಯು, ಜನರಲ್ ಎಲೆಕ್ಟ್ರಿಕ್ ಸಂಸ್ಥೆಯ ಮಿ|| ಡೇವಿಡ್ ಎಂಬುವವರ ಮನೆಯಲ್ಲಿ ಕೆಲಸಕ್ಕೆ ಸೇರಿದಳು. ಇವರು ತುಂಬ ಹಣವಂತರಾದ್ದರಿಂದ ಪಾರ್ವತೀಬಾಯಿಗೆ ತಮ್ಮ ಮನೆಯಲ್ಲಿಯೇ ಒಂದು ಕೊಠಡಿಯನ್ನು ಕೊಟ್ಟು, ಆಕೆಯ ಊಟಕ್ಕೆ ಬೇಕಾದ ಏರ್ಪಾಡುಗಳನ್ನೂ ಒದಗಿಸಿ ವಾರ ಒಂದಕ್ಕೆ ಐದು ಡಾಲರುಗಳ ಸಂಬಳದ ಮೇಲೆ ತೆಗೆದುಕೊಂಡರು. ಮಿ|| ಡೇವಿಡ್‌ರ ಮನೆಯಲ್ಲಿ ನಾಲ್ಕೈದು ವಾರಗಳು ಕೆಲಸಮಾಡಿದುದಾಯಿತು. ಹೀಗೆ ಕೇವಲ ಹೊಟ್ಟೆಪಾಡಿಗಾಗಿ ಕೂಲಿಯ ಕೆಲಸ ಮಾಡಿಕೊಂಡಿರುವುದರಿಂದ ಪ್ರೊ|| ಕರ್ವೆಯವರು ತನ್ನನ್ನು ಅಮೆರಿಕೆಗೆ ಕಳುಹಿಸಿದ ಉದ್ದೇಶ, ಇಂಗ್ಲಿಷು ಕಲಿಯುವುದು, ಅಮೆರಿಕೆಯ ವಿದ್ಯಾಸಂಸ್ಥೆಗಳಲ್ಲಿ ಕೆಲಸ ನಡೆಸುವ ಕ್ರಮಗಳನ್ನು ತಿಳಿದುಕೊಳ್ಳುವುದು, ವಿಧವಾಶ್ರಮಕ್ಕೆ ಹಣ ಶೇಖರಿಸುವುದು, ಇವುಗಳಲ್ಲಿ ಯಾವುದೂ ಇದುವರೆಗೆ ನೆರವೇರಲಿಲ್ಲ. ಇನ್ನುಮೇಲಾದರೂ ಯಾವುದಾದರೂ ನೆಪದಿಂದ ತನ್ನ ಉದ್ದೇಶಗಳನ್ನು ಕೈಲಾದಮಟ್ಟಿಗೂ ಸಾಧಿಸಬೇಕು ಎಂದು ಪಾರ್ವತೀಬಾಯಿಯು ಯೋಚಿಸಿದಳು. ಅಮೆರಿಕೆಯ ಹೆಂಗುಸರು ತಮ್ಮ ವಿರಾಮ ಕಾಲದಲ್ಲಿ ಪುಸ್ತಕಗಳನ್ನು ಮಾರುವುದುಂಟು. ತಾನೂ ಹಾಗೆ ಏಕೆ ಮಾಡಬಾರದು ? ಎಂದುಕೊಂಡು, ಪ್ರೊ|| ಗೋಖಲೆಯವರ " ನಿರುದ್ಯೋಗ " ಪುಸ್ತಕದ

ಪ್ರತಿಗಳನ್ನು ವಿರಾಮಕಾಲದಲ್ಲಿ ಮಾರಿಕೊಂಡು ಬರುವುದಾಗಿ ಪ್ರೊ|| ಗೋಖಲೆಯವರಿಗೆ ಸೂಚಿಸಿದಳು. ಅದಕ್ಕೆ ಪ್ರೊ|| ಗೋಖಲೆಯವರು ಸಂತೋಷಪಟ್ಟು ಮೊದಲು ಹತ್ತು ಪ್ರತಿಗಳನ್ನು ಕೊಟ್ಟರು. ಛಳಿಯ ದೆಸೆಯಿಂದ ಅಮೆರಿಕೆಯ ಮನೆಗಳ ತಲೆಬಾಗಿಲು ಯಾವಾಗಲೂ ಮುಚ್ಚಿರುತ್ತದೆ. ಯಾರಾದರೂ ಮನೆಯೊಳಕ್ಕೆ ಹೋಗಬೇಕಾದರೆ ಬಾಗಿಲನ್ನು ತಟ್ಟಬೇಕು ಅಥವಾ ಘಂಟೆಯನ್ನು ಒತ್ತಬೇಕು. ಪಾರ್ವತೀಬಾಯಿಯು ತನ್ನ ಕೆಲಸಕ್ಕಾಗಿ ಹಾಗೆಯೇ ಮಾಡಬೇಕಾಯಿತು. ಹೀಗೆ ತನ್ನ ವಿರಾಮ ಕಾಲದಲ್ಲಿ ಪಾರ್ವತೀಬಾಯಿಯು ಸುಮಾರು ೪೦ ಪುಸ್ತಕಗಳನ್ನು ಮಾರಿದುದಲ್ಲದೆ ಅನೇಕರ ಪರಿಚಯವನ್ನು ಮಾಡಿಕೊಂಡಳು. ಮಿ|| ಡೇವಿಡ್‌ರ ಮನೆಯ ಕೆಲಸದವಳು ತನ್ನ ರಜೆಯಿಂದ ಹಿಂದಿರುಗಿ ಬಂದುದರಿಂದ ಪಾರ್ವತೀಬಾಯಿಗೆ ಅವರ ಮನೆಯ ಕೆಲಸ ಹೋಯಿತು. ತಾನು ಪುಸ್ತಕ ಮಾರುವಾಗ ಪರಿಚಿತರಾಗಿದ್ದ ಮಿಸೆಸ್ ಅನೀಸ್ ಎಂಬುವವರಿಗೆ ಕೆಲಸಕ್ಕೆ ಹೆಂಗುಸು ಬೇಕಾಗಿತ್ತು. ಪಾರ್ವತೀಬಾಯಿಯು ಅವರ ಮನೆಯ ಕೆಲಸಕ್ಕೆ ಸೇರಿಕೊಂಡಳು. ಅವರ ಮನೆಯಲ್ಲಿ ಪಾರ್ವತೀಬಾಯಿಗೆ ಬಹಳ ಒಳ್ಳೆಯ ಕೊಠಡಿಯನ್ನು ಕೊಟ್ಟುದಲ್ಲದೆ ಉತ್ತಮವಾದ ಏರ್ಪಾಡುಗಳನ್ನು ಮಾಡಿಕೊಟ್ಟರು. ಅಲ್ಲಿ ಐದಾರು ವಾರಗಳು ಕೆಲಸಮಾಡುವ ವೇಳೆಗೆ ಮಿ|| ಅನೀಸ್‌ರವರಿಗೆ ಬೋಸ್ಟನ್ ಪಟ್ಟಣಕ್ಕೆ ವರ್ಗವಾಗಿ ಹೋಯಿತು. ಅವರು ಪಾರ್ವತೀಬಾಯಿಯನ್ನು ಬಹಳ ಮೆಚ್ಚಿಕೊಂಡಿದ್ದರು. ಬೀಳ್ಕೊಡುವಾಗ ಆಕೆಗೆ ಅವರು ಒಂದು ಯೋಗ್ಯತಾ ಪತ್ರವನ್ನು ಸಹ ಕೊಟ್ಟರು.

ಮೇ, ೨೯, ೧೯೧೯.

ಶ್ರೀ|| ಪಾರ್ವತೀಬಾಯಿ ಆಠವ್‌ಳೆಯವರು ಬಹಳ ನಂಬಿಕಸ್ಥರು. ಆಕೆಯ ನಡತೆಯು ಘನತರವಾದುದು. ಆಕೆಯು ಸತ್ಯವಾದಿ. ಮನೆಯ ಸಾಧಾರಣ ಕೆಲಸಗಳಿಗೆ ಆಕೆಯನ್ನು ನಾನು ಸಂತೋಷದಿಂದ ಸಿಫಾರಸು ಮಾಡುತ್ತೇನೆ.

**ಫ್ರಾಂಕ್ ಎಚ್. ಅನೀಸ್,**
**ಷೆನೆಕ್ಟಡಿ, ನ್ಯೂಯಾರ್ಕ್.**

ಮಿ|| ಅನೀಸರ ಮನೆ ಬಿಟ್ಟಮೇಲೆ ಪ್ರೊ|| ಗೋಖಲೆ ಮತ್ತು ಮಿಸೆಸ್. ಸಿಕೋರರ ಪ್ರಯತ್ನದಿಂದ ಪಾರ್ವತೀಬಾಯಿಯು ವೈ. ಡಬ್ಲ್ಯು. ಸಿ. ಎ. ಆಡಳಿತದಲ್ಲಿದ್ದ ಒಂದು ದೊಡ್ಡ ಆಸ್ಪತ್ರೆಯಲ್ಲಿ ತಟ್ಟೆ ತೊಳೆಯುವ ಕೆಲಸವನ್ನು ಗೊತ್ತುಮಾಡಿಕೊಂಡಳು. ಅಲ್ಲಿ ವಾರಕ್ಕೆ ೧೫ ಡಾಲರು ಸಂಬಳ. ಆಸ್ಪತ್ರೆಯ ಕೆಲಸಕ್ಕೆ ಹೋಗಬೇಕಾದ ಕಾಲಕ್ಕೆ ಮುಂಚಿನಿಂದಲೂ ಪಾರ್ವತೀಬಾಯಿಗೆ ಪಿತ್ತವು ಅರಳಿದಂತಾಗಿ ಮೈ ಸ್ವಸ್ಥವಾಗಿರಲಿಲ್ಲ. ಹವಾ ಬದಲಾವಣೆ ಮತ್ತು ಆಹಾರ ವ್ಯತ್ಯಾಸ ದಿಂದ ಹಾಗಾಗಿರಬಹುದೆಂದೂ ಆದಕ್ಕಾಗಿ ಸಿಕ್ಕಿದ್ದ ಕೆಲಸವನ್ನು ಬಿಡ ಬಾರದೆಂದೂ ಪಾರ್ವತೀಬಾಯಿಯು ಗೊತ್ತಾದ ದಿವಸಕ್ಕೆ ಸರಿಯಾಗಿ ಆಸ್ಪತ್ರೆಗೆ ಹೋಗಿ ಕೆಲಸಕ್ಕೆ ಸೇರಿಕೊಂಡಳು. ಆಸ್ಪತ್ರೆಯು ಮೂರಂತಸ್ತಿನ ದೊಡ್ಡ ಕಟ್ಟಡ. ಎರಡು ಮೂರನೆಯ ಅಂತಸ್ತುಗಳಲ್ಲಿ ಸುಮಾರು ೬೦೦ ರೋಗಿಗಳಿಗೆ ವಸತಿಯುಂಟು. ಕೆಳಗಡೆ ಅಡಿಗೆಯ ಮನೆ ಮತ್ತು ಸಿಬ್ಬಂದಿಯ ವಸತಿಗಳು. ಕೆಲಸದವರೇ ನೂರು ಮಂದಿ. ಅಷ್ಟು ದೊಡ್ಡ ಆಸ್ಪತ್ರೆಯ ತಟ್ಟೆಗಳೆಂದರೆ ಹೊತ್ತಿಗೆ ಸಾವಿರಗಟ್ಟಲೆ ತೊಳೆಯ ಬೇಕಾಗಿತ್ತು.

ಆಸ್ಪತ್ರೆಯ ಯಜಮಾನಿ (ಜನರಲ್ ಹೌಸ್‌ಕೀಪರ್) ಪಾರ್ವತೀ ಬಾಯಿಯು ಮಾಡಬೇಕಾದ ಕೆಲಸಗಳನ್ನೆಲ್ಲ ತಿಳಿಸಿದಳು. ಈಕೆಗೆ ಕೆಳ ಗಡೆ ಒಂದು ಕೊಠಡಿ ಕೊಟ್ಟಳು. ಮೇಲಿನ ಅಂತಸ್ತುಗಳಿಗೆ ಬಿಸಿನೀರನ್ನು ಕೊಂಡುಹೋಗುವ ನಲ್ಲಿಗಳು ಈ ಕೊಠಡಿಯಿಂದ ಹಾಯ್ದು ಹೋಗು ತ್ತಿದ್ದುವು. ಆ ನಲ್ಲಿಗಳಿಂದ ಹಬೆ ಹೊರಡುತ್ತಿತ್ತು ಮತ್ತು ನೀರುಹನಿಗಳೆಲ್ಲ ಹಾಸಿಗೆಯ ಮೇಲೆಯೇ ಬೀಳುತ್ತಿದ್ದುವು. ಅಂಥ ಅನನುಕೂಲವಾದ ಕೊಠಡಿಯನ್ನು ಪಾರ್ವತೀಬಾಯಿಯು ಅಮೆರಿಕೆಯ ಮತ್ತೆಲ್ಲಿಯೂ ನೋಡಿರಲಿಲ್ಲವಂತೆ. ಮೊದಲ ದಿವಸದ ತಟ್ಟೆಗಳನ್ನು ತೊಳೆದುದಾಯಿತು. ತಟ್ಟೆಗಳು ಬಹಳ ಶುಚಿಯಾಗಿರಲೆಂದು ಬಹಳ ಬಿಸಿಯಾದ ನೀರನ್ನು ಅವುಗಳ ಮೇಲೆ ಬಿಡುತ್ತಾರೆ. ಬಿಸಿ ನೀರು ಬಿದ್ದಕೂಡಲೇ ಆ ತಟ್ಟೆ ಗಳಿಂದ ಹೊರಟ ಕೆಟ್ಟ ನಾತವು ಮೊದಲೆ ಪಿತ್ತವಿಕಾರ ಹೊಂದಿದ್ದ ಪಾರ್ವತೀಬಾಯಿಗೆ ಹೊಟ್ಟೆ ತೊಳೆಸಿಕೊಂಡುಬಂದಿತು. ಹೇಗೋ

ತಡೆದುಕೊಂಡು ತಟ್ಟೆಗಳನ್ನು ತೊಳೆದು ತನ್ನ ಕೊಠಡಿಯನ್ನು ಸೇರಿ ಹಾಸಿಗೆಯಲ್ಲಿ ಬಿದ್ದುಕೊಂಡಳು. ಹೊಸ ಕೆಲಸದವಳನ್ನು ವಿಚಾರಿಸಿ ಕೊಂಡು ಹೋಗಲು ಆಸ್ಪತ್ರೆಯ ಯಜಮಾನಿಯು ಈಕೆಯ ಕೊಠಡಿಗೆ ಬಂದರು. ಪಾರ್ವತೀಬಾಯಿಯ ಸ್ಥಿತಿಯನ್ನು ಕಂಡು ಕರುಣೆಯಿಂದ ಡಾಕ್ಟರನ್ನು ಕರೆತಂದು ತೋರಿಸಿದರು. ಡಾಕ್ಟರು ಬಿಸಿಯಾಗಿ ಸ್ನಾನ ಮಾಡಬೇಕೆಂದು ಹೇಳಿದರು. ಸ್ನಾನದ ಮನೆಗೆ ಹೋಗಬೇಕಾದರೆ ಸುಮಾರು ೨೦೦ ಅಡಿಗಳು ಹೋಗಬೇಕು. ಪಾರ್ವತೀಬಾಯಿಯು ಮೆಲ್ಲಗೆ ಹೋಗಿ ಸ್ನಾನಮಾಡಿ ಹಿಂದಿರುಗುತ್ತಿದ್ದಳು. ಅರ್ಧದಾರಿಯಲ್ಲಿ ಈಕೆಗೆ ಕಣ್ಣುಕತ್ತಲೆಗಟ್ಟಿ ಕೆಳಗೆ ಬೀಳುವಂತಾಯಿತು. ಯಾವುದೋ ಕೆಲಸದ ಮೇಲೆ ಆ ಕಡೆ ಹೋಗುತ್ತಿದ್ದ ಯಜಮಾನಿಯು ಈಕೆಯ ಸ್ಥಿತಿ ಯನ್ನು ಕಂಡು ಓಡಿಬಂದು ಒಂದು ಸ್ಟ್ರೆಚರ್ ತರಿಸಿ ಅದರ ಮೇಲೆ ಮಲ ಗಿಸಿ ಆಕೆಯ ಕೊಠಡಿಗೆ ಸಾಗಿಸಬೇಕಾಯಿತು. ದಾರಿಯ ಉದ್ದಕ್ಕೂ ವಾಂತಿ, ಆಮೇಲೆ ಪಾರ್ವತಿಗೆ ಜ್ಞಾನ ಬರಬೇಕಾದರೆ ಕೆಲವು ಗಂಟೆಗಳಾ ದುವು. ಅಂತೂ ಕೆಲಸಕ್ಕೆಂದು ಆಸ್ಪತ್ರೆಗೆ ಬಂದ ಪಾರ್ವತೀಬಾಯಿಯು ಅಲ್ಲಿಯೇ ಚಿಕಿತ್ಸೆ ಹೊಂದಬೇಕಾಯಿತು. ಈಕೆಯು ತಟ್ಟೆಗಳನ್ನು ತೊಳೆ ಯುವುದು ಹೋಗಿ ಇನ್ನೊಬ್ಬರು ಈಕೆಯ ತಟ್ಟೆಗಳನ್ನು ತೊಳೆಯ ಬೇಕಾಯಿತು.

ನಾಲ್ಕು ದಿವಸ ಹಾಸಿಗೆಬಿಟ್ಟು ಏಳಲು ಸಹ ಆಗಲಿಲ್ಲ. ತನ್ನ ಕೊಠ ಡಿಯ ಅನನುಕೂಲತೆ ಒಂದು ಕಡೆ. ಇನ್ನೊಂದು ಕಡೆ ಹತ್ತಿರದಲ್ಲೇ ಇದ್ದ ಅಡಿಗೆ ಮನೆಯಿಂದ ಬರುವ ಗಾಡಿಗಟ್ಟಲೆ ಬೇಯಿಸುತ್ತಿದ್ದ ಮೀನು ಮಾಂಸಗಳ ನಾತ. ಇವನ್ನು ತಡೆಯುವುದು ಪಾರ್ವತೀಬಾಯಿಗೆ ಕಷ್ಟ ವಾಯಿತು. ಯಜಮಾನಿಯು ಬಹಳ ಒಳ್ಳೆಯವಳಾದುದರಿಂದ ಪಾರ್ವತೀಬಾಯಿಯನ್ನು ಅಕ್ಕರೆಯಿಂದ ನೋಡಿಕೊಂಡು ಬೇಗನೆ ಗುಣ ವಾಗುವಂತೆ ಹೊರಗಿನ ವೈದ್ಯರಿಂದ ಔಷಧಿ ಕೊಡಿಸಿದರು. "ನೀವು ಬಹಳ ಶುಚಿಯಾಗಿದ್ದೀರಿ. ಶ್ರೇಷ್ಠ ಕುಲದವರು. ಈ ಹೀನ ಕೆಲಸ ಗಳು ನಿಮಗೆ ಅಭ್ಯಾಸವಿಲ್ಲ. ಈ ಕೆಲಸವನ್ನು ನೀವು ಬಿಡುವುದು ಮೇಲು" ಎಂದು ಹೇಳಿ ಪಾರ್ವತೀಬಾಯಿಯನ್ನು ತಮ್ಮ ಸ್ನೇಹಿತರಾದ

ಮಿ|| ಬಾಲ್ಡ್‌ವಿನ್ ಎಂಬುವವರ ಮನೆಯಲ್ಲಿ ಕೆಲಸಕ್ಕೆ ಗೊತ್ತುಮಾಡಿ ಕೊಟ್ಟರು.

ಪಾರ್ವತೀಬಾಯಿಯು ತನ್ನ ದೇಹಾಲಸ್ಯದ ವಿಷಯವನ್ನು ಪ್ರೊ|| ಗೋಖಲೆಯವರಿಗಾಗಲಿ ಮಿಸೆಸ್ ಸಿಕೋರರಿಗಾಗಲಿ ತಿಳಿಸಲಿಲ್ಲ. ತಮ್ಮಿಂದ ಅವರಿಗೆ ವೃಥಾ ತೊಂದರೆ ಆಗಬಾರದೆಂದೇ ಹೀಗೆ ಮಾಡಿದಳು. ಮಿ|| ಬಾಲ್ಡ್‌ವಿನ್ನರು ಜನರಲ್ ಎಲೆಕ್ಟ್ರಿಕ್‌ನಲ್ಲಿ ಭಾರಿ ಹುದ್ದೇದಾರರು. ತುಂಬ ಹಣವಂತರು. ಅವರ ಮನೆಯಲ್ಲಿ ಪಾರ್ವತೀಬಾಯಿಯು ಯಾವ ಆತಂಕವೂ ಇಲ್ಲದೆ ನಿಶ್ಚಿಂತಳಾಗಿದ್ದಳು.

ವಿಧಿಯು ಪಾರ್ವತೀಬಾಯಿಗೆ ವಿರೋಧವಾಗಿದ್ದುದರಿಂದ ಇಲ್ಲಿಂದ ಆಕೆಯನ್ನು ತಪ್ಪಿಸುವುದೇ ಅಲ್ಲದೆ ಅಮೆರಿಕೆಯಿಂದಲೇ ಓಡಿಸುವ ಪ್ರಯತ್ನ ನಡೆಸಿತು. ಆದರೆ ಪಾರ್ವತೀಬಾಯಿಯು ತನ್ನ ಧೈರ್ಯಸಾಹಸಗಳಿಂದ ಆ ಕಷ್ಟವನ್ನು ತಪ್ಪಿಸಿಕೊಂಡಳು.

## ೨೦. ಪಾರ್ವತೀಬಾಯಿಯನ್ನು ಅಮೆರಿಕೆಯಿಂದ ಹೊರಡಿಸುವ ಸಂಧಾನ

ಮಿ|| ಬಾಲ್ಡ್‌ವಿನ್ನರು ಬಹಳ ಗುಣಾಢ್ಯರು. ಅವರ ಮನೆಯಲ್ಲಿ ಅಡಿಗೆ ಮಾಡುವುದಕ್ಕೆ ಒಬ್ಬ ನಾರ್ವೆಯ ಹೆಂಗುಸು ಇದ್ದಳು. ಮಿಕ್ಕ ಮನೆಯ ಕೆಲಸಗಳಿಗೆ ಪಾರ್ವತೀಬಾಯಿ. ಇವರ ವಾಸಕ್ಕೆ ಪ್ರತ್ಯೇಕ ಕೊಠಡಿಗಳಲ್ಲದೆ ಅವರ ಇಷ್ಟಬಂದ ಅಡಿಗೆಗಳನ್ನು ಮಾಡಿಕೊಳ್ಳುವ ಏರ್ಪಾಡನ್ನೂ ಮಾಡಿಕೊಟ್ಟಿದ್ದರು. ಪಾರ್ವತೀಬಾಯಿಯ ಸಸ್ಯಾಹಾರ ನಿಯಮವನ್ನು ಆ ಮನೆಯವರು ಬಹಳ ಗೌರವಿಸುತ್ತಿದ್ದರು. ಮನೆಯ ಯಜಮಾನಿ ಮಿಸೆಸ್ ಬಾಲ್ಡ್‌ವಿನ್‌ರು ಇವರನ್ನು ಕೆಲಸದವರಂತೆ ಕಾಣದೆ ಸಂಗಾತಿಗಳಂತೆ ಭಾವಿಸಿ ಗೌರವಿಸುತ್ತಿದ್ದರು. ಅವರು ಮನೆಯ ಕೆಲಸ ದವರನ್ನು ನಮ್ಮ ದೇಶದ ಶ್ರೀಮಂತರಿಗಿಂತಲೂ ಹೆಚ್ಚು ಅಕ್ಕರೆಯಿಂದ ಕಾಣುತ್ತಿದ್ದರು. ಯಜಮಾನಿಯ ಇಬ್ಬರು ಮಕ್ಕಳನ್ನು ನೋಡಿ ಕೊಂಡು ಪಾರ್ವತೀಬಾಯಿಯು ಇವರ ಮನೆಯಲ್ಲಿ ಬಹಳ ಸಂತೋಷ ವಾಗಿದ್ದಳು.

ಹೀಗಿರಲಾಗಿ ಎಲೆಕ್ಟ್ರಿಕಲ್ ಎಂಜಿನಿಯರಿಂಗ್ ಕಲಿಯಲು ಬಂದಿದ್ದ ಒಬ್ಬ ಬಂಗಾಳಿ ವಿದ್ಯಾರ್ಥಿಗೆ ಪಾರ್ವತೀಬಾಯಿಯು ಮಿ|| ಬಾಲ್ಡ್‌ವಿನರ ಮನೆಯಲ್ಲಿರುವ ಸಮಾಚಾರವು ಹೇಗೋ ತಿಳಿಯಿತು. ಆತನು ಕೂಡಲೇ ಟೆಲಿಫೋನಿನ ಮೂಲಕ ಪಾರ್ವತೀಬಾಯಿಯವರನ್ನು ಕರೆದು ತನ್ನ ಮನೆಗೆ ಬರಬೇಕೆಂದು ಕೋರಿದನು. ಶನಿವಾರದ ದಿನ ಪಾರ್ವತೀ ಬಾಯಿಯು ಆ ಬಂಗಾಳಿ ಬಂಧುವಿನ ಮನೆಗೆ ಹೋದಳು. ಅಲ್ಲಿ ಇವ ರಿಬ್ಬರಿಗೂ ಮಾತುಕತೆ ನಡೆಯಿತು:

ವಿದ್ಯಾರ್ಥಿ—ಪ್ರೊ|| ಕರ್ವೆಯವರು ನಿಮ್ಮನ್ನು ಈ ದೇಶಕ್ಕೆ ಕಳುಹಿಸುವ ಅವಿವೇಕವನ್ನೇಕೆ ಮಾಡಿದರೋ ಕಾಣೆ.

ಪಾರ್ವತೀಬಾಯಿ—ಅಮೆರಿಕೆಯ ವಿದ್ಯಾಸಂಸ್ಥೆಗಳು ಮಹಿಳೆಯರಿಗಾಗಿ ಹೇಗೆ ಕೆಲಸಮಾಡುತ್ತಿವೆಯೆಂಬುದನ್ನೂ ಮತ್ತು ಇಂಗ್ಲಿಷ್ ಭಾಷೆ

ಯನ್ನೂ ತಿಳಿದುಕೊಳ್ಳಲು ಪ್ರೊ|| ಕರ್ವೆಯವರು ನನ್ನನ್ನು ಕಳುಹಿಸಿದರು.

ವಿದ್ಯಾರ್ಥಿ—ತಾವು ಉತ್ತಮ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರು. ಮ್ಲೇಚ್ಛರನ್ನೇತಕ್ಕೆ ಸೇವಿಸುತ್ತಿದ್ದೀರಿ?

ಪಾರ್ವತೀಬಾಯಿ—ಏಕಾಗಬಾರದು? ನಾನು ಕಳ್ಳಿಯಲ್ಲ. ನನ್ನ ಜೀವನೋಪಾಯಕ್ಕಾಗಿ ಕಷ್ಟಪಟ್ಟು ಕೆಲಸಮಾಡಿ ಸಂಪಾದಿಸುತ್ತೇನೆ. ವಿರಾಮ ಸಿಕ್ಕಾಗಲೆಲ್ಲ ನನ್ನ ಉದ್ದೇಶವನ್ನು ನೆರವೇರಿಸಲು ಪ್ರಯತ್ನಿಸುತ್ತೇನೆ. ಆದರಲ್ಲಿ ತಪ್ಪೇನು?

ವಿದ್ಯಾರ್ಥಿ—ನೀವು ಖಂಡಿತವಾಗಿಯೂ ಹೀಗೆ ಮನೆಮನೆ ಅಲೆದು ದುಡಿಯಬಾರದು. ನೀವು ಹೀಗೆ ಕೂಲಿಮಾಡುವುದು ಭಾರತೀಯರಾದ ನಮಗೆ ಬಹಳ ಅವಮಾನವಾಗಿದೆ. ಕೂಡಲೇ ಸ್ವದೇಶಕ್ಕೆ ಹಿಂದಿರುಗಿ.

ಪಾರ್ವತೀಬಾಯಿ—ನಿಮಗಿರುವ ದೇಶಾಭಿಮಾನ ನನಗೂ ಇದೆ. ಅನೇಕ ಭಾರತೀಯ ವಿದ್ಯಾರ್ಥಿಗಳಂತೆಯೇ ನಾನೂ ಸ್ವಾವಲಂಬನದಿಂದ ವ್ಯಾಸಂಗ ಮಾಡುತ್ತಿದ್ದೇನೆ. ಇದರಲ್ಲಿ ಅವಮಾನಪಡತಕ್ಕುದೇನೂ ನನಗೆ ತೋರುವುದಿಲ್ಲ. ಅಲ್ಲದೆ ನನಗೆ ಈ ರೀತಿಯ ಸ್ವಾವಲಂಬನವು ಗೌರವವಾಗಿದೆ.

ವಿದ್ಯಾರ್ಥಿ—ಅದೆಲ್ಲ ಆಗದು. ನಿಮ್ಮ ಕೆಲಸದಲ್ಲಿ ನಿಮಗೆ ಅವಮಾನ ತೋರದಿದ್ದರೂ ಹೀನ ಜನರ ಎಂಜಲು ತಟ್ಟೆಗಳನ್ನು ತೊಳೆದು ನೀವು ಬ್ರಾಹ್ಮಣ ಧರ್ಮಕ್ಕೆ ಒಂದು ಕಳಂಕವನ್ನು ತಂದಿರುವಿರಿ. ನೀವು ಖಂಡಿತವಾಗಿಯೂ ಹಿಂದಿರುಗಲೇ ಬೇಕು.

ಪಾರ್ವತೀಬಾಯಿ—ನಾನು ವಾಪಸು ಹೋಗುವುದಕ್ಕೆ ನನ್ನಲ್ಲಿ ಹಣವಿಲ್ಲ. ನನ್ನನ್ನು ವಾಪಸು ಕಳುಹಿಸುವುದಕ್ಕೆ ನೀವು ತಕ್ಕ ಏರ್ಪಾಡು ಮಾಡುವುದಾದರೆ ಮಾಡಿ. ಆಮೇಲೆ ನಾನು ಯೋಚಿಸಿ ನೋಡುತ್ತೇನೆ.

ಬಾಲ್ಡ್ವಿನ್ ಕುಟುಂಬದವರು ಬಹಳ ಗೌರವಸ್ಥರು, ಗುಣಾಢ್ಯರು. ಜಾತಿಯಲ್ಲಿ ಅವರು ಬ್ರಾಹ್ಮಣರಲ್ಲದಿದ್ದರೂ ಸತ್ಯದಲ್ಲಿಯೂ ಧಾರ್ಮಿಕ ಜೀವನದಲ್ಲಿಯೂ ಅವರು ನಿಜವಾದ ಬ್ರಾಹ್ಮಣರಿದ್ದರು. ಅಂಥವರ ಸೇವೆಯಲ್ಲಿ ಯಾವ ದೋಷವೂ ಕಾಣಲಿಲ್ಲ. ಇತರ ಭಾರತೀಯ ವಿದ್ಯಾರ್ಥಿಗಳಂತೆ ತಾನೂ ಸ್ವಾವಲಂಬನೆಯಿಂದ ಅಮೆರಿಕೆಯಲ್ಲಿ ತನ್ನ ಉದ್ದೇಶವನ್ನು ನೆರವೇರಿಸಿಕೊಳ್ಳಲು ಅಂಥ ಗೌರವಸ್ಥರ ಮನೆಯಲ್ಲಿ ಕೆಲಸಮಾಡುವುದರಿಂದ ಯಾವ ಬಗೆಯ ಅಪಮಾನವೂ ತೋರಲಿಲ್ಲ. ಆದರೆ ಆ ಬಂಗಾಳಿ ಬಾಬುವಿಗೆ ಮಾತ್ರ ಪಾರ್ವತೀಬಾಯಿಯ ಈ ಕೆಲಸವು ಬಹಳ ಅಪಮಾನಕರವಾಗಿ ಕಂಡಿತು. ಆತನು ಹೇಗಾದರೂ ಪಾರ್ವತೀಬಾಯಿಯನ್ನು ಭಾರತಕ್ಕೆ ಕಳುಹಿಸುವುದೇ ಸರಿಯೆಂದು ಹಟಮಾಡಿ ಅದಕ್ಕಾಗಿ ಬಹಳ ಹವಣಿಸುತ್ತಿದ್ದನು. ಆತನು ಪ್ರೊ|| ಗೋಖಲೆಯವರನ್ನು ಕಂಡು ತಾನು ಪಾರ್ವತೀಬಾಯಿಗಾಗಿ ಎಷ್ಟು ಕನಿಕರಪಡುತ್ತಿರುವನೆಂದೂ ಮತ್ತು ತನ್ನ ಅಪಾರವಾದ ದೇಶಪ್ರೇಮವು ಎಂತಹುದೆಂದೂ ಹೇಳಿಕೊಂಡನು. ಈ ಮಾತುಗಳಿಗೆ ಮರುಳಾಗಿ ಪ್ರೊ|| ಗೋಖಲೆಯವರು ಪಾರ್ವತೀಬಾಯಿಯನ್ನು ಜತೆಮಾಡಿ ಕಳುಹಿಸಲು ಯಾರಾದರೂ ಸಿಕ್ಕುವುದಾದರೆ ಆಕೆಯ ಪ್ರಯಾಣಕ್ಕೆ ಬೇಕಾದ ಸಹಾಯವನ್ನು ತಾವು ಮಾಡುವುದಾಗಿ ಭರವಸೆಯಿತ್ತರು. ಗೋಖಲೆಯವರ ಈ ಅನಿರೀಕ್ಷಿತ ಜವಾಬಿನಿಂದ ಬಂಗಾಳಿ ಬಂಧುವಿಗೆ ಉತ್ಸಾಹವು ಇಮ್ಮಡಿಯಾಯಿತು. ಪಾರ್ವತೀಬಾಯಿಯ ಅಭಿಪ್ರಾಯವನ್ನು ಕೇಳುವಷ್ಟು ನಾವಕಾಶವನ್ನು ಸಹ ಮಾಡದೆ ಆತನು ಕೂಡಲೆ ಆಕಯ ಪ್ರಯಾಣಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಿದನು.

ಈ ಸಮಯಕ್ಕೆ ಒಬ್ಬ ಬರ್ಮಾ ವಿದ್ಯಾರ್ಥಿಯು ಸ್ವದೇಶಕ್ಕೆ ಹಿಂದಿರುಗಲಿರುವನೆಂಬ ಸಮಾಚಾರವು ಬಂಗಾಳಿ ಬಂಧುವಿಗೆ ತಿಳಿಯಿತು. ಆ ವಿದ್ಯಾರ್ಥಿಯ ಸಂಗಡ ಪಾರ್ವತೀಬಾಯಿಯನ್ನು ಕಳುಹಿಸುವುದೆಂಬ ಭರವಸೆಯಿಂದ ಜಹಜಿನ ಟಿಕೆಟ್ಟನ್ನು ಸಹ ಆಕೆಯ ಅನುಮತಿಯಿಲ್ಲದೆ ಕೊಂಡುಬಿಟ್ಟನು. ಒಂದು ಟ್ರಂಕನ್ನೂ ಸೂಟ್‌ಕೇಸನ್ನೂ ತಂದು ಆಕೆಯ ಸಾಮಾನುಗಳೆಲ್ಲವನ್ನೂ ಸ್ವಂತ ಮಗನಿಗಿಂತ ಹೆಚ್ಚು ವಿಶ್ವಾಸದಿಂದ ಕಟ್ಟಿ ಪ್ರಯಾಣಕ್ಕೆ ಬೇಕಾದ ಸಕಲವನ್ನೂ ಸಿದ್ಧಪಡಿಸಿದನು.

ಪಾರ್ವತೀಬಾಯಿಗೆ ಈಗಲೆ ಸ್ವದೇಶಕ್ಕೆ ಹಿಂದಿರುಗಲು ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಬಂಗಾಳಿ ಬಂಧುವು ಅತಿನೇಮದಿಂದ ಈಕೆಯ ಪಯಣದ ಎಲ್ಲ ಸಿದ್ಧತೆಗಳನ್ನೂ ಮುಗಿಸಿಬಿಟ್ಟಿದ್ದನು. ಈ ಸಂಬಂಧದಲ್ಲಿ ಒಂದೇ ದೇಶದವರಾದ ಇವರಿಬ್ಬರೂ ತಮ್ಮತಮ್ಮಲ್ಲಿ ಮನಸ್ತಾಪ ತಂದು ಕೊಳ್ಳುವುದೆಂದರೆ ಪರದೇಶದಲ್ಲಿ ಅಷ್ಟು ಚೆನ್ನಾಗಿರಲಾರದೆಂದುಕೊಂಡು ತನ್ನ ಹಣೆಯಲ್ಲಿ ಬರೆದಿದ್ದಂತೆ ಆಗಲಿ ಎಂದು ಪಾರ್ವತೀಬಾಯಿಯು ಸುಮ್ಮನಿದ್ದಳು. ಬಂಗಾಳಿಯಾದರೋ ಪಾರ್ವತೀಬಾಯಿಯು ಹೀಗೆ ಮನೆಮನೆ ಅಲೆದು ಕೂಲಿ ಮಾಡುವುದೆಂದರೆ ಭಾರತ ಜನಾಂಗಕ್ಕೇ ದೊಡ್ಡ ಅವಮಾನವೆಂಬ ಧೃಢ ನಂಬಿಕೆಯುಳ್ಳವನಾಗಿ ಆಕೆಯನ್ನು ಹಿಂದಕ್ಕೆ ಕಳುಹಿಸುವುದರಿಂದ ತಾನು ಭಾರತಕ್ಕೆ ಬಹಳ ಉಪಕಾರ ಮಾಡಿ ಕೃತಾರ್ಥನಾಗುವೆನೆಂದುಕೊಂಡಿದ್ದನು. ಕಡೆಗೆ ಪಾರ್ವತೀ ಬಾಯಿಯು ಪ್ರೊ|| ಗೋಖಲೆ, ಮಿಸೆಸ್ ಸಿಕೋರ್, ಮುಂತಾದ ತನ್ನ ಮಿತ್ರರನ್ನೆಲ್ಲ ಬಹಳ ವ್ಯಸನದಿಂದ ಬೀಳ್ಕೊಂಡು ಬಂಗಾಳಿ ಬಂಧುವಿನೊಡನೆ ನ್ಯೂಯಾರ್ಕಿಗೆ ಪ್ರಯಾಣ ಮಾಡಿದಳು.

ಬಂಗಾಳಿ ಬಂಧುವು ನ್ಯೂಯಾರ್ಕ್ ತಲಪಿದಮೇಲೆ ಪಾರ್ವತೀ ಬಾಯಿಯನ್ನು ತನ್ನ ವಸತಿಯಿಂದ ಹೊರಗೆ ಹೋಗಿ ಯಾರನ್ನೂ ನೋಡಿ ಮಾತನಾಡಕೂಡದು ಎಂಬ ನಿರ್ಬಂಧದ ಮೇಲೆ ಕ್ರೈಸ್ತ ತರುಣಿಯರ ಸಂಘ(ವೈ. ಡಬ್ಲ್ಯು. ಸಿ. ಎ.)ದಲ್ಲಿ ಬಿಡಾರ ಮಾಡಿಸಿದನು. ಅಲ್ಲದೆ ನ್ಯೂಯಾರ್ಕಿನಲ್ಲಿದ್ದ ತನ್ನ ಸ್ನೇಹಿತರಿಗೆಲ್ಲ ತಾನು ಅನ್ಯದೇಶದಲ್ಲಿ ಗುಲಾಮಗಿರಿಯಲ್ಲಿ ಬಿದ್ದಿದ್ದ ಒಬ್ಬ ಮಹಾರಾಷ್ಟ್ರ ಮಹಿಳೆಯನ್ನು ದಾಸ್ಯದಿಂದ ಮುಕ್ತಳನ್ನಾಗಿ ಮಾಡಿ ಸ್ವದೇಶಕ್ಕೆ ಕಳುಹಿಸಲು ಕರೆತಂದಿರುವುದಾಗಿಯೂ ಇಷ್ಟವುಳ್ಳವರು ಆಕೆಯನ್ನು ನೋಡಬಹುದೆಂತಲೂ ವರ್ತಮಾನ ಕಳುಹಿಸಿದನು. ವಿಷಯ ತಿಳಿದ ಕೂಡಲೆ 'ವೇದಾಂತಾಶ್ರಮ'ದ ವಿದ್ಯಾರ್ಥಿಗಳಾದ ಸ್ವಾಮಿ ಬೋಧಾನಂದ ಮತ್ತು ಸುರೇಂದ್ರ ಬೋಸ್ ಎಂಬಿಬ್ಬರು ತಮ್ಮ ಕೆಲವು ಬಂಗಾಳಿ ಮಿತ್ರರೊಂದಿಗೆ ಬಂದು ಪಾರ್ವತೀ ಬಾಯಿಯನ್ನು ಕಂಡು ತಮ್ಮ ಮಿತ್ರನ ಸಾಹಸವನ್ನು ಕೊಂಡಾಡಿದರು. ಅವರಿಗೆ ಈ ಕೆಳಕಂಡ ಸಂಭಾಷಣೆ ನಡೆಯಿತು.

ವಿದ್ಯಾರ್ಥಿಗಳು:—ಸ್ವದೇಶಕ್ಕೆ ಹೋಗುವುದೆಂದರೆ ನಿಮಗೆ ಬಹಳ ಸಂತೋಷವಾಗಿದೆಯಲ್ಲವೇ?

ಪಾರ್ವತೀಬಾಯಿ:—ಇಲ್ಲ ನಾನು ಬಂದ ಉದ್ದೇಶವು ನೆರವೇರುವ ಮೊದಲೇ ಹಿಂದಿರುಗಬೇಕಲ್ಲ ಎಂದು ಸಂಕೋಚವಾಗಿದೆ.

ವಿದ್ಯಾರ್ಥಿಗಳು:—ಹಾಗಾದರೆ ನೀವು ಮನೆಮನೆಗೂ ಅಲೆದು ಕೂಲಿ ಕೆಲಸ ಮಾಡುವುದೇಕೆ?

ಪಾರ್ವತೀಬಾಯಿ:–ಒಂದು ಕುಟುಂಬದಿಂದ ಮತ್ತೊಂದು ಕುಟುಂಬಕ್ಕೆ ಹೋಗಿ ಅವರ ಸಹಾಯದಿಂದ ಅನೇಕರ ಪರಿಚಯ ಮಾಡಿಕೊಂಡು ನನ್ನ ಉದ್ದೇಶವನ್ನು ನೆರವೇರಿಸಿಕೊಳ್ಳುವುದಲ್ಲದೆ, ಸ್ವತಂತ್ರವಾಗಿ ಜೀವನ ಸಾಗಿಸಿಕೊಳ್ಳುವುದರಲ್ಲಿ ತಪ್ಪೇನು?

ವಿದ್ಯಾರ್ಥಿಗಳು:—ಹಾಗಾದರೆ ವಾಪಸು ಹೋಗುವುದಕ್ಕೆ ಇಷ್ಟೇಕೆ ಆತುರಪಡುತ್ತೀರಿ?

ಪಾರ್ವತೀಬಾಯಿ:—ನಾನು ಮನಃಪೂರ್ತಿಯಾಗಿ ಇಷ್ಟಪಡಲಿಲ್ಲ. ಈ ಬಂಗಾಳಿ ಬಂಧುವು ಎಲ್ಲ ಏರ್ಪಾಡುಗಳನ್ನೂ ನಡೆಯಿಸಿರುವನು. ಆತನ ಮನಸ್ಸಿಗೆ ನೋವುಂಟುಮಾಡಬಾರದೆಂದು ಒಪ್ಪಿಕೊಳ್ಳಬೇಕಾಯಿತು.

ಈ ಮಾತುಕತೆಗಳ ಪರಿಣಾಮವಾಗಿ ಸುರೇಂದ್ರಬೋಸ್ ಮತ್ತು ಆತನ ಸ್ನೇಹಿತರು, “ಜೀವನೋಪಾಯಕ್ಕಾಗಿ ಪಾರ್ವತೀಬಾಯಿಯು ಅನ್ಯದೇಶದಲ್ಲಿ ಮನೆಕೆಲಸಗಳನ್ನು ಮಾಡಿದರೆಂಬ ಕಾರಣಕ್ಕಾಗಿ ಆಕೆಯ ಇಷ್ಟಕ್ಕೆ ವಿರೋಧವಾಗಿ ವಾಪಸು ಕಳುಹಿಸುವುದು ಸರಿಯೇ?” ಎಂದು ತರ್ಕಮಾಡಿದರು. “ಸಮಯಬಿದ್ದಾಗ ಬ್ರಾಹ್ಮಣಪುತ್ರರಾದ ನಾವು ಮ್ಲೇಚ್ಛರ ಚಾಕರಿ ಮಾಡುವುದಿಲ್ಲವೇ? ನಮ್ಮಂತೆಯೇ ನಮ್ಮ ಸೋದರಿಯೂ ವರ್ತಿಸಿದಳು; ಅದರಲ್ಲಿ ಅವಮಾನವೇನೂ ಇಲ್ಲ” ಎಂದು ತೀರ್ಮಾನಿಸಿದರು. ಸುರೇಂದ್ರಬೋಸು ಪಾರ್ವತೀಬಾಯಿಯನ್ನು ಕುರಿತು, “ನಿಮಗೆ ವಾಪಸು ಹೋಗಲು ಖಂಡಿತವಾಗಿಯೂ ಇಷ್ಟವಿಲ್ಲವೇ ಹೇಳಿ. ನಾನು ನಿಮ್ಮ ಪಕ್ಷ ವಹಿಸಿ ನನ್ನ ಸ್ನೇಹಿತನೊಂದಿಗೆ ಮಾತನಾಡಿ

ಈ ಪ್ರಯಾಣವನ್ನು ತಪ್ಪಿಸುತ್ತೇನೆ" ಎಂದನು. ಅದಕ್ಕೆ ಪಾರ್ವತೀ ಬಾಯಿಯು "ಸ್ನೇಹಿತರಾದ ನೀವುಗಳು ಮನಸ್ತಾಪ ತಂದುಕೊಳ್ಳಬೇಡಿ. ನಾನು ಅವನಿಗೆ ಮಾತುಕೊಟ್ಟಿರುವಪ್ರಕಾರ ಮಾಡುವುದೇ ಮೇಲು" ಎಂದಳು.

ಸುರೇಂದ್ರಬೋಸರು ಮಹಾರಾಷ್ಟ್ರದವರಾದ ಡಾ|| ಹರ್ಡೀಕರ ರನ್ನು ಬರಮಾಡಿಕೊಂಡು ಮಹಾರಾಷ್ಟ್ರದವಳಾದ ಪಾರ್ವತೀಬಾಯಿಯ ವಿಷಯವನ್ನೆಲ್ಲ ಅವರಿಗೆ ವಿವರಿಸಿದರು. ಡಾ|| ಹರ್ಡೀಕರರು "ಆಕೆಯನ್ನು ನನ್ನ ವಶಕ್ಕೆ ಒಪ್ಪಿಸಿದರೆ ನಾನು ಎಲ್ಲವನ್ನೂ ಇತ್ಯರ್ಥಮಾಡುವೆನು" ಎಂದರು. ಸುರೇಂದ್ರಬೋಸ್ ಮತ್ತು ಸ್ವಾಮಿ ಬೋಧಾನಂದರು ತಮ್ಮ ಸ್ನೇಹಿತನಿಗೆ ಪಾರ್ವತೀಬಾಯಿಯನ್ನು ಡಾ|| ಹರ್ಡೀಕರರಿಗೆ ಒಪ್ಪಿಸು ವುದೇ ನ್ಯಾಯವೆಂದು ಹೇಳಿದರು. ಬಂಗಾಳಿ ಬಂಧುವಿಗೆ ಈ ಸಲಹೆ ಒಪ್ಪಲಿಲ್ಲ. "ನನಗೆ ಕೊಟ್ಟ ಮಾತಿಗೆ ಪಾರ್ವತೀಬಾಯಿಯು ತಪ್ಪಿದಂ ತಾಯಿತು. ಅಲ್ಲದೆ ಎಲ್ಲ ವೆಚ್ಚಕ್ಕೂ ಪ್ರೊ|| ಗೋಖಲೆಯವರು ಸಹಾಯ ಮಾಡಿರುವರು. ಆದುದರಿಂದ ಅವರನ್ನು ಕೇಳದೆ ನಾನು ಪಾರ್ವತೀ ಬಾಯಿಯನ್ನು ಡಾ|| ಹರ್ಡೀಕರರಿಗೆ ಒಪ್ಪಿಸಲಾರೆ" ಎಂದು ಹಠದಿಂದ ನುಡಿದನು.

ಡಾ|| ಹರ್ಡೀಕರರು ಕೂಡಲೆ ಪೆನೆಕ್ಕಡಿಯಲ್ಲಿದ್ದ ಪ್ರೊ|| ಗೋಖಲೆ ಯವರಿಗೆ ಟೆಲಿಫೋನು ಮುಖಾಂತರ ಎಲ್ಲ ವಿಷಯವನ್ನೂ ತಿಳಿಸಿದರು. ಈ ಮಾತುಕತೆಗಳ ಪರಿಣಾಮವೇನಾದೀತೋ ಎಂದು ಪಾರ್ವತೀ ಬಾಯಿಯು ಬಲು ತವಕಿಸುತ್ತಿದ್ದಳು. ಅದಕ್ಕೆ ಪ್ರೊ|| ಗೋಖಲೆಯವರು, "ಪಾರ್ವತೀಬಾಯಿಯು ಎಳೆಯ ಮಗುವಲ್ಲ. ಆಕೆಯ ಇಷ್ಟದಂತೆ ಮಾಡಿರಿ" ಎಂದು ಉತ್ತರವಿತ್ತರು. ಆಗ ಪಾರ್ವತೀಬಾಯಿಯನ್ನು ಆವರಿಸಿದ್ದ ನಿರಾಶೆಯೆಂಬ ಕತ್ತಲಿನಲ್ಲಿ ಆಶಾಸೂರ್ಯನ ಕಿರಣವು ಮತ್ತೆ ಮೂಡಿದಂತಾಯಿತು. ಬಂಗಾಳಿ ಬಂಧುವಿನ ಸಂಧಾನಗಳೆಲ್ಲ ಮುರಿದುವು. ಪ್ರೊ|| ಗೋಖಲೆಯವರು ಟಿಕೆಟ್ಟಿಗಾಗಿ ಕೊಟ್ಟಿದ್ದ ಹಣವನ್ನು ವಾಪಸು ಮಾಡುವುದು ಹೇಗೆಂದು ಪಾರ್ವತೀಬಾಯಿಗೆ ಆತಂಕವಾಯಿತು. ಆ ಹೊಸ ಸ್ನೇಹಿತರ ಮೂಲಕ ಆ ಟಿಕೆಟ್ಟನ್ನು ಸ್ವಲ್ಪ ನಷ್ಟದಮೇಲೆ ಹಿಂದಕ್ಕೆ

ಕೊಡಿಸಿ ತನ್ನಲ್ಲಿದ್ದ ಹಣವನ್ನು ಜತೆಮಾಡಿ ಪ್ರೊ|| ಗೋಖಲೆಯವರಿಗೆ ಹಣವನ್ನು ವಾಪಸು ಕಳುಹಿಸಿಬಿಟ್ಟಳು.

ಈ ಸಂಧಿ ಸಮಯದಲ್ಲಿ ತನಗೆ ನೆರವಾಗಿ ಎಲ್ಲ ವಿಧದಲ್ಲಿಯೂ ಸಹಾಯ ನೀಡಿದ ಮರಾಠಿ ಬಂಧುವಾದ ಡಾ|| ಹರ್ಡೀಕರರಿಗೆ ಪಾರ್ವತೀಬಾಯಿ ಬಹಳ ಕೃತಜ್ಞತೆಯನ್ನು ಸೂಚಿಸಿದಳು.

ಪುನಃ ಪೆನೆಕ್ಕಡಿಗೆ ಹಿಂದಿರುಗಲು ಇಷ್ಟವಿಲ್ಲದೆ ಪಾರ್ವತೀಬಾಯಿ ನ್ಯೂಯಾರ್ಕ್ ಪಟ್ಟಣದಲ್ಲೇ ಇದ್ದು ಅಲ್ಲಿಯೇ ಏನಾದರೂ ಕೆಲಸ ಹುಡುಕಿಕೊಂಡು ತನ್ನ ಉದ್ದೇಶ ನೆರವೇರಿಸಿಕೊಳ್ಳಬೇಕೆಂದು ನಿಶ್ಚಯಿಸಿದಳು.

# ೨೧. ನ್ಯೂಯಾರ್ಕ್ ನಗರದ ಅನುಭವ

ಶ್ರೀ ಲಾಲಾ ಲಜಪತರಾಯರೂ ಡಾ|| ಹರ್ಡೀಕರರೂ ಯಂಗ್ ಇಂಡಿಯಾ ಕಛೇರಿಯ ಮುಖಾಂತರ ನ್ಯೂಯಾರ್ಕಿನಲ್ಲಿ ಭಾರತ ರಾಜಕೀಯ ಚಳುವಳಿಯನ್ನು ಚುರುಕಿನಿಂದ ಪ್ರಚಾರ ಮಾಡುತ್ತಿದ್ದರು. ಇವರು ಅಲ್ಲಿನ ಭಾರತೀಯರ ಪ್ರಯೋಜನಕ್ಕಾಗಿ ಒಂದು ನೈಟ್‌ಸ್ಕೂಲ್ (ರಾತ್ರಿ ಪಾಠಶಾಲೆ) ನಡೆಸುತ್ತಿದ್ದರು. ಪಾರ್ವತೀಬಾಯಿಯು ಬಿಡಾರವಾದ ಕ್ರೈಸ್ತ ತರುಣಿಯರ ಸಂಘಕ್ಕೂ ಆ ಶಾಲೆಗೂ ತುಂಬ ದೂರವಿದ್ದುದರಿಂದ ಆ ಶಾಲೆಯಿಂದ ಆಕೆಯು ಪ್ರಯೋಜನ ಪಡೆಯಲಾಗಲಿಲ್ಲ.

ಒಂದು ದಿವಸ 'ಯಂಗ್ ಇಂಡಿಯಾ' ಕಾರ್ಯ ಮಂದಿರಕ್ಕೆ ಬಂದಿದ್ದ ಆಮದುರಫ್ತು ವ್ಯಾಪಾರಿಗಳಾದ ಶ್ರೀ ಠಕ್ಕರ್ ಎಂಬುವವರಿಗೆ ಡಾ|| ಹರ್ಡೀಕರರು ಪಾರ್ವತೀಬಾಯಿಯ ಪರಿಚಯ ಮಾಡಿಕೊಟ್ಟು ತಮ್ಮ ಮನೆಯಲ್ಲಿ ಆಕೆಗೆ ಏನಾದರೂ ಕೆಲಸ ಕೊಡಬೇಕೆಂದು ಕೇಳಿದರು. ಠಕ್ಕರರು ಬ್ರೂಕ್ಲಿನಲ್ಲಿದ್ದರು. ಐಸ್‌ಲೆಂಡಿನವಳನ್ನು ಮದುವೆಯಾಗಿದ್ದರು. ಅವರಿಗೆ ವಿಕ್ರಮಾದಿತ್ಯ, ಮನು ಎಂಬಿಬ್ಬರು ಮುದ್ದಾದ ಮಕ್ಕಳು. ಅವರ ಮನೆಯಲ್ಲಿ ಪಾರ್ವತೀಬಾಯಿಯು ಅಡಿಗೆ ಮಾಡುವುದು, ನೀರು ತರುವುದು, ಮಕ್ಕಳನ್ನು ನೋಡಿಕೊಳ್ಳುವುದು ಇವೇ ಮೊದಲಾದ ಕೆಲಸಗಳನ್ನು ಮಾಡಬೇಕಾಗಿತ್ತು. ಮಿಸೆಸ್ ಠಕ್ಕರರಿಗೆ ಐದಾರು ಭಾಷೆಗಳು ಚೆನ್ನಾಗಿ ಬರುತ್ತಿದ್ದುವು. ಆದರೆ ಆಕೆಗೆ ಕೆಲಸಗಳ ನಡುವೆ ವಿರಾಮ ಸಿಕ್ಕದು. ಪಾರ್ವತೀಬಾಯಿಗೂ ವಿರಾಮ ಸಿಗುವುದೇ ಕಷ್ಟ. ಈ ಕಾರಣಗಳಿಂದ ಆಕೆಯ ಹತ್ತಿರ ಇಂಗ್ಲಿಷು ಕಲಿತುಕೊಳ್ಳುವ ಅವಕಾಶವೇ ತೋರಲಿಲ್ಲ. ಹೀಗೆ ಮೂರುವಾರಗಳು ಕಳೆದು ಪಾರ್ವತೀಬಾಯಿಯು ಪುನಃ ನ್ಯೂಯಾರ್ಕಿಗೆ ಬಂದುಬಿಟ್ಟಳು.

ಅಮೆರಿಕೆಯ ಮನೆಗಳ ತಲೆಬಾಗಿಲು ಯಾವಾಗಲೂ ಮುಚ್ಚಿರುತ್ತದೆ. ಬಾಗಿಲು ತಟ್ಟಿ ಒಳಕ್ಕೆ ಹೋಗಿ ಕೆಲಸ ಕೇಳುವುದೆಂದರೆ ಗೌರವ

ವಾಗಿರುವುದಿಲ್ಲ. ಅದಕ್ಕಾಗಿ ಪಾರ್ವತೀಬಾಯಿಯು "Rooms To-Let" (ಕೊಠಡಿಗಳು ಬಾಡಿಗೆಗೆ ದೊರೆಯುತ್ತವೆ) ಎಂದು ಬರೆದಿರುವ ಮನೆಗಳಿಗೆ ಹೋಗಿ ಬಾಗಿಲು ತಟ್ಟುವುದು, ಮನೆಯವರ ಸಂಗಡ ಮೊದಲು ಕೊಠಡಿಯ ಬಾಡಿಗೆಯನ್ನು ವಿಚಾರಿಸಿ ಅನಂತರ ಅಲ್ಲಿ ತನಗೆ ಏನಾದರೂ ಕೆಲಸ ಇದೆಯೇ ಎಂದು ಕೇಳುವ ಪದ್ಧತಿಯನ್ನು ಮಾಡಿಕೊಂಡಳು.

ಅಮೆರಿಕೆಯ ಕೆಲವು ಬಡ ಕುಟುಂಬಿಗಳು ಒಂದು ದೊಡ್ಡ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಕೆಲವು ಕೊಠಡಿಗಳಲ್ಲಿ ಕುರ್ಚಿ, ಮೇಜು, ಮಂಚ, ಹಾಸಿಗೆ, ದೀಪ ಮೊದಲಾದ ಎಲ್ಲ ಅನುಕೂಲ್ಯಗಳನ್ನೂ ಒದಗಿಸಿ ವಿದ್ಯಾರ್ಥಿಗಳಿಗೆ ಬಾಡಿಗೆಗೆ ಕೊಡುತ್ತಾರೆ. ಇಂತಹ ಚಿಕ್ಕ ಕೊಠಡಿಯೊಂದಕ್ಕೆ ಸುಮಾರು ೩೫ ರೂಪಾಯಿ ಬಾಡಿಗೆ ತೆಗೆದುಕೊಳ್ಳುತ್ತಾರೆ. ಕೆಲವು ವೇಳೆ ಆ ವಿದ್ಯಾರ್ಥಿಗಳು ಬೆಳಗಿನ ಕಾಫಿ ತಿಂಡಿಗೆ ಅಲ್ಲಿಯೇ ಅನುಕೂಲ ಮಾಡಿಸಿಕೊಂಡು ಅದಕ್ಕೆ ಬೇರೆ ಹಣ ಕೊಡುವುದುಂಟು. ಈ ವಿಧದಲ್ಲಿ ಎಷ್ಟೋ ಬಡ ಕುಟುಂಬಿಗಳು ಜೀವನ ಮಾಡುತ್ತಾರೆ.

ಒಂದು ದಿವಸ ಪಾರ್ವತೀಬಾಯಿಯು ಕೆಲಸ ಹುಡುಕಿಕೊಂಡು ಒಬ್ಬ ಸ್ಕಾಟಿಷ್ ಹೆಂಗುಸಿನ ಮನೆಗೆ ಹೋದಳು. ಆಕೆಯು ೧೮–೨೦ ಕೊಠಡಿಗಳನ್ನು ಮೇಲ್ಕಂಡ ಹಾಗೆ ಬಾಡಿಗೆಗೆ ಕೊಟ್ಟಿದ್ದರು. ಆಕೆಗೆ ಕೊಠಡಿಗಳನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಹೆಂಗುಸು ಬೇಕಾಗಿದ್ದುದರಿಂದ ಕೂಡಲೇ ಪಾರ್ವತೀಬಾಯಿಯನ್ನು ಗೊತ್ತುಮಾಡಿಕೊಂಡರು. ಅವರ ಮನೆಯಲ್ಲಿ ಪಾರ್ವತೀಬಾಯಿ ಆರು ವಾರ ಕೆಲಸಕ್ಕಿದ್ದಳು. ಬಡತನದ ದೆಸೆಯಿಂದ ಕೆಲಸಕ್ಕೆ ಇಟ್ಟುಕೊಳ್ಳುವುದು ಸಾಧ್ಯವಿಲ್ಲವೆಂದು ಆಕೆಯು ಪಾರ್ವತೀಬಾಯಿಯನ್ನು ಕಳುಹಿಸಬೇಕಾಗಿ ಬಂತು. ಅಂತೂ ಪಾರ್ವತೀಬಾಯಿ ಮತ್ತೆ ಕೆಲಸ ಹುಡುಕಿಕೊಂಡು ಹೊರಟಳು. ಒಂದು ದಿವಸ "ರೂಮ್ಸ್ ಟು ಲೆಟ್" ಬರೆದಿದ್ದ ಕಡೆ ಹೋಗಿ ಬಾಗಿಲು ತಟ್ಟಲು, ಒಬ್ಬ ಐರಿಷ್ ಮಹಿಳೆ ಬಂದು ಬಾಗಿಲು ತೆಗೆದು "ನೀನಾರು" ಎಂದು ಪಾರ್ವತೀಬಾಯಿಯನ್ನು ಕೇಳಿದರು.

ಪಾರ್ವತೀಬಾಯಿ—ನನಗೆ ಬಾಡಿಗೆಗೆ ಕೊಠಡಿ ದೊರೆಯುತ್ತೊ? ಕೆಲಸ ದೊರೆಯುತ್ತೊ?

ಆಕೆ:—ಇದೇನು? ನೀನೇನು ಜಿಪ್ಸಿ(ಕೊರವಂಜಿ)ಯೇ?

ಪಾರ್ವತೀಬಾಯಿ:—ಅಲ್ಲ.

ಆಕೆ:—ಹಾಗಾದರೆ ನೀನಾರು ಮತ್ತೆ? ಭಾರತೀಯಳೊ? ಬ್ರಿಟಿಷಳೊ?

ಪಾರ್ವತೀಬಾಯಿ—ನಾನು ಭಾರತೀಯಳು. ಬ್ರಿಟಿಷ್ ಭಾರತದ ಪ್ರಜೆ.

ಆಕೆ:—ಹಾಗಾದರೆ ನಿನಗೆ ಇಲ್ಲಿ ಕೊಠಡಿಯಾಗಲಿ ಕೆಲಸವಾಗಲಿ ದೊರೆಯುವುದಿಲ್ಲ.

ಪಾರ್ವತೀಬಾಯಿ:—ಏಕೆ?

ಆಕೆ:—ಬ್ರಿಟಿಷ್ ಜನರೆಲ್ಲ ಕೆಟ್ಟವರು.

ಪಾರ್ವತೀಬಾಯಿ:—ಎಲ್ಲರೂ ಕೆಟ್ಟವರೇ?

ಆಕೆ:—ಎಲ್ಲರೂ ಅಲ್ಲ, ಕೆಲವರು ಬಹಳ ಒಳ್ಳೆಯವರೂ ಉಂಟು.

ಪಾರ್ವತೀಬಾಯಿ:—ಅವರಾರೆಂಬುದನ್ನು ದಯವಿಟ್ಟು ತಿಳಿಸಬಲ್ಲಿರಾ?

ಆಕೆ:—ಈ ಊರಿನ ಬ್ರಾಡ್ವೆಯಲ್ಲಿ ಲಾಲಾಜಿ ಮತ್ತು ಡಾ|| ಹರ್ಡೀಕರ್ ಎಂಬಿಬ್ಬರಿದ್ದಾರೆ. ಅವರು ಬಹಳ ಗುಣಾಢ್ಯರು.

ಪಾರ್ವತೀಬಾಯಿ:—ಅವರೂ ನಾನೂ ಒಂದೇ ಜನಾಂಗದವರು. ನಾವೆಲ್ಲರೂ ನೆಂಟರಂತೆಯೇ ಇದ್ದೇವೆ.

ಆಕೆ:—ಹಾಗೇನು? ಸರಿ, ಇನ್ನು ಅನುಮಾನವೇ ಇಲ್ಲ. ಇದೇ ನಿನ್ನ ಮನೆಯೆಂದು ತಿಳಿದುಕೊ. ನೀನು ಇಲ್ಲೇ ಇದ್ದುಕೊಂಡು ಕೆಲಸ ಮಾಡಬಹುದು.

ಪಾರ್ವತೀಬಾಯಿಯು ಆ ಐರಿಷ್ ಮಹಿಳೆಯ ಮನೆಯಲ್ಲಿ ನಿಂತಳು. ಆಕೆಯ ಹೆಸರು ಮಿಸೆಸ್ ಷಾಹೆ. ಅಲ್ಲಿ ಪಾರ್ವತೀಬಾಯಿಗೆ ವಾರವೊಂದಕ್ಕೆ ೫ ಡಾಲರುಗಳ ಸಂಬಳ ದೊರೆಯುತ್ತಿತ್ತು. ಮಿಸೆಸ್



೧೮೯೬ರಲ್ಲಿ ಹಿಂದೂ ವಿತಂತು ಶರಣಾಲಯವು ಆರಂಭವಾದ
ಮೂರಂಕಣದ ಕುಟೀರ.
ಶ್ರೀ॥ ಪಾರ್ವತೀಬಾಯಿಯು ಆಗ ಅಡಿಗೆಯವಳೂ ಪರಿಚಾರಕಳೂ ಆಗಿದ್ದಳು.



ಹಿಂದೂ ವಿತಂತು ಶರಣಾಲಯದ ಕಟ್ಟಡ ೧೯೦೮ರಲ್ಲಿ. ಆಲಯದ ಅಭಿವೃದ್ಧಿಗೆ
ಶ್ರೀ। ಪಾರ್ವತೀಬಾಯಿಯು ಪಟ್ಟ ಶ್ರಮವು ಅಸಾಧಾರಣವಾದುದು.

ಷಾಹೆ ಬಹಳ ಒಳ್ಳೆಯವರು. ಪಾರ್ವತೀಬಾಯಿಗೆ ಬೇಕಾದುದನ್ನೆಲ್ಲ ಆಕೆ ಒದಗಿಸಿಕೊಡುತ್ತಿದ್ದರು. ಆಕೆಯು ಅಮೆರಿಕದಲ್ಲಿದ್ದರೂ ತಮ್ಮ ಸ್ವದೇಶವಾದ ಐರ್ಲೆಂಡಿನಲ್ಲಿ ಬಹಳ ಪ್ರೀತಿಯನ್ನಿಟ್ಟಿದ್ದರು. ತಮ್ಮ ಮನೆಯಲ್ಲಿ ಆಕೆಯು ಐರ್ಲೆಂಡಿನ ಸ್ವಾತಂತ್ರ್ಯಕ್ಕಾಗಿ ಜೀವನವನ್ನು ಧಾರೆ ಎರೆದಿದ್ದ ಮಹನೀಯರ ಚಿತ್ರಗಳನ್ನು ಹಾಕಿಕೊಂಡಿದ್ದರು. ಆಕೆಯ ಮನೆಯ ಕೊಠಡಿಗಳಲ್ಲಿ ಹದಿನೆಂಟು ಜನರು ವಾಸಮಾಡಿ ಕೊಂಡಿದ್ದರು. ಸಂಜೆಯಲ್ಲಿ ಅವರೆಲ್ಲರೂ ಸಿನಿಮಾವಿಗೋ ಸಭೆಗಳಿಗೋ ಹೊರಟುಹೋಗುತ್ತಿದ್ದರು. ಆಗ ಆಕೆ "ಐರ್ಲೆಂಡಿನ ಸ್ವರಾಜ್ಯಕ್ಕೆ ಸಹಾಯಮಾಡಿ" ಎಂಬುದಾಗಿ ಬರೆದಿರುವ ಚೀಟಿಯನ್ನು ಅಂಟಿಸಿದ ಒಂದು ತಗಡಿನ ಪೆಟ್ಟಿಗೆಯನ್ನು ಹಿಡಿದುಕೊಂಡು ಮನೆ ಮನೆಗೂ ಸುತ್ತಿ ಸುಮಾರು ಹದಿನೈದು ಇಪ್ಪತ್ತು ರೂಪಾಯಿಗಳಷ್ಟು ಶೇಖರಿಸುತ್ತಿದ್ದರು. ವಿರಾಮಕಾಲದಲ್ಲಿ ಆಕೆ ಐರಿಷ್ ಪತ್ರಿಕೆಗಳನ್ನು ಓದುತ್ತಿದ್ದರು. ಬಡವ ರಾದರೂ, ಬಲು ಸ್ವಲ್ಪ ವಿದ್ಯೆಯನ್ನು ಕಲಿತಿದ್ದರೂ, ಇಷ್ಟೊಂದು ಸ್ವದೇಶಾಭಿಮಾನವುಳ್ಳ ಹೆಂಗುಸರಿರುವ ದೇಶಕ್ಕೆ ಸ್ವಾತಂತ್ರ್ಯವು ಶೀಘ್ರ ದಲ್ಲೇ ದೊರೆಯದೆ ಇರದು ಎನಿಸುತ್ತದೆ. ಕೊಠಡಿಗಳಲ್ಲಿ ವಾಸಿಸು ತ್ತಿದ್ದ ವಿದ್ಯಾರ್ಥಿಗಳಿಂದ ಪಾರ್ವತೀಬಾಯಿಯು ೨೫ ಡಾಲರುಗಳನ್ನು ಪುಣೆಯ, 'ವಿಧವಾಶ್ರಮ'ಕ್ಕಾಗಿ ವಸೂಲಿಮಾಡಿದಳು. ಆಕೆ ಅಮೆರಿಕೆ ಯಲ್ಲಿ 'ವಿಧವಾಶ್ರಮ'ಕ್ಕೆ ಹಣ ಸಂಗ್ರಹಿಸಿದ್ದು ಅದೇ ಮೊದಲು. ಮಿಸೆಸ್ ಷಾಹೆಯವರ ಪ್ರೋತ್ಸಾಹದ ಮೇಲೆ ಪಾರ್ವತೀಬಾಯಿಯು ಒಂದು ರಾತ್ರಿಯ ಶಾಲೆಗೆ ಹೋಗಿ ಇಂಗ್ಲಿಷ್ ಕಲಿಯಲಾರಂಭಿಸಿದಳು.

ಒಂದು ದಿವಸ ಆಕೆಯು "ಯಂಗ್ ಇಂಡಿಯಾ" ಕಛೇರಿಯಲ್ಲಿ ದ್ದಾಗ ಅಲ್ಲಿ ಡಾ|| ಹರ್ಡೀಕರರು ಆಕೆಯನ್ನು ಮಿಸ್ ಓರೆಲಿ ಎಂಬ ಮಹಿಳೆಗೆ ಪರಿಚಯಮಾಡಿಕೊಟ್ಟರು. ಈಕೆಯು ನ್ಯೂಯಾರ್ಕಿಗೆ ಸೇರಿದ ಬ್ರೂಕ್ಲೀನಲ್ಲಿದ್ದರು. ಬಹಳ ಧಾರಾಳ ಮನಸ್ಸು ಈಕೆಯದು. ಡಾ|| ಹರ್ಡೀಕರರನ್ನು ಕುರಿತು ಈಕೆಯು, "ಅಂತರ್ರಾಷ್ಟ್ರೀಯ ಕೆಲಸಗಾರರ ಸಮ್ಮೇಳನವು ವಾಷಿಂಗ್‌ಟನ್ನಲ್ಲಿ ನಡೆಯಲಿದೆ. ನೀವು ಪಾರ್ವತೀ ಬಾಯಿಯನ್ನು ಭಾರತೀಯ ಮಹಿಳಾ ಕೆಲಸಗಾರರ ಪ್ರತಿನಿಧಿಯಾಗಿ ಏಕೆ

ಕಳುಹಿಸಬಾರದು ?" ಎಂದು ಕೇಳಿದರು. ಅವರು (ಹರ್ಡೀಕರರು) "ನಮ್ಮಲ್ಲಿ ಹಣವಿಲ್ಲ, ಏನು ಮಾಡುವುದು ?" ಎಂದರು. "ನಾನು ಆಕೆಗೆ ತಕ್ಕ ಏರ್ಪಾಡನ್ನು ಮಾಡಲು ಪ್ರಯತ್ನಿಸಿ ನೋಡುತ್ತೇನೆ" ಎಂದು ಹೇಳಿ ಮಿಸ್ ಓರೆಲಿಯವರು ವಾಷಿಂಗ್‌ಟನ್ ನಗರಕ್ಕೆ ಹೊರಟುಹೋದರು. ಪಾರ್ವತೀಬಾಯಿಯು ತಾನು ವಾಷಿಂಗ್‌ಟನ್‌ಗೆ ಹೋಗುವೆನೆಂದು ಕನಸಿನಲ್ಲೂ ನೆನಸಿರಲಿಲ್ಲ. ಎರಡುವಾರಗಳಾದರೂ ಮಿಸ್ ಓರೆಲಿಯಿಂದ ಸಮಾಚಾರವೇ ಬರಲಿಲ್ಲವಾದುದರಿಂದ ಪಾರ್ವತೀಬಾಯಿ ಅಲ್ಲಿಗೆ ಹೋಗುವ ಆಸೆಯನ್ನು ಬಿಟ್ಟಳು. ಆದರೆ ಒಂದು ದಿನ "ಯಂಗ್ ಇಂಡಿಯಾ" ಕಛೇರಿಯಿಂದ ಮಿಸೆಸ್ ಷಾಹೆರವರಿಗೆ ಒಂದು ಟೆಲಿಫೋನ್ ವರ್ತಮಾನ ಬಂತು. ಅದರಲ್ಲಿ ಡಾ|| ಹರ್ಡೀಕರರು ಮಿಸ್ ಓರೆಲಿಯವರಿಂದ ಆಹ್ವಾನ ಬಂತೆಂದೂ ಪಾರ್ವತೀಬಾಯಿಯು ಕೂಡಲೆ ವಾಷಿಂಗ್‌ಟನ್‌ಗೆ ಹೊರಡಬೇಕೆಂದೂ ತಿಳಿಸಿದರು. ಮಿಸ್ ಓರೆಲಿಯವರು ಪಾರ್ವತೀಬಾಯಿಯ ಪ್ರಯಾಣದ ವೆಚ್ಚವನ್ನೂ, ಆ ನಗರದಲ್ಲಿರುವಷ್ಟು ಕಾಲವೂ ವಸತಿಗಾಗುವ ವೆಚ್ಚವನ್ನೂ ವಹಿಸಿದರು. ಡಾ|| ಹರ್ಡೀಕರರು ಆದಿನವೇ ಎಲ್ಲ ಸಿದ್ಧತೆಗಳನ್ನೂ ಮಾಡಿ ಪಾರ್ವತೀಬಾಯಿಯನ್ನು ವಾಷಿಂಗ್‌ಟನ್‌ಗೆ ಹೊರಡುವ ರೈಲಿಗೆ ಹತ್ತಿಸಿದರು.

## ೨೨. ವಾಷಿಂಗ್‌ಟನ್ನಲ್ಲಿ ನಡೆದ ಅಂತರ್ರಾಷ್ಟ್ರೀಯ ಕೆಲಸಗಾರರ ಸಮ್ಮೇಳನ

ಮಹಾಯುದ್ಧವಾದಮೇಲೆ ನಡೆದ ಅನೇಕ ಸಮ್ಮೇಳನಗಳಲ್ಲಿ ೧೯೧೯ ರಲ್ಲಿ ವಾಷಿಂಗ್‌ಟನ್ನಲ್ಲಿ ನಡೆದ "ಅಂತರ್ರಾಷ್ಟ್ರೀಯ ಕೆಲಸಗಾರರ ಸಮ್ಮೇಳನ"ವೂ ಒಂದು. ಅದರಲ್ಲಿ ಗಂಡುಸರ ವಿಭಾಗ, ಹೆಂಗುಸರ ವಿಭಾಗ ಎಂದು ಎರಡು ವಿಭಾಗಗಳು. ಭಾರತದಿಂದ ಈ ಸಮ್ಮೇಳನಕ್ಕೆ ಶ್ರೀ ಬಿ. ಪಿ. ವಾಡಿಯಾರವರೂ, ಶ್ರೀ ಮಲ್ಹಾರ್ ನಾರಾಯಣ ಜೋಷಿಯವರೂ ಪ್ರತಿನಿಧಿಗಳಾಗಿ ಬಂದಿದ್ದರು. ಹೆಂಗುಸರ ವಿಭಾಗಕ್ಕೆ ಭಾರತದ ಪ್ರತಿನಿಧಿಯೆಂದರೆ ಪಾರ್ವತೀಬಾಯಿಯೊಬ್ಬಳೇ. ಕ್ಯಾಲಿಫೋರ್ನಿಯ, ನ್ಯೂಯಾರ್ಕ್ ಮುಂತಾದ ಸಂಸ್ಥಾನಗಳಲ್ಲಿ ಅನೇಕ ಭಾರತೀಯ ಸ್ತ್ರೀಯರು ಕೆಲಸಗಾರರಾಗಿ ನೆಲೆಸಿದ್ದಾರೆ. ಅವರ ಸಂಖ್ಯೆ ಕಡಿಮೆಯಾದರೂ ಅವರ ಕಷ್ಟಗಳು, ಅವರಮೇಲೆ ಅನ್ಯಾಯವಾಗಿ ಹೊರಿಸಿರುವ ಪ್ರತಿಬಂಧಕಗಳು ಬಹಳ ಇವೆ.

ಅಮೆರಿಕದ ರಾಜಧಾನಿಯಾದ ವಾಷಿಂಗ್‌ಟನ್ ನಗರಕ್ಕೆ ನ್ಯೂಯಾರ್ಕಿನಿಂದ ರೈಲಿನಲ್ಲಿ ಹೋಗಬೇಕಾದರೆ ಏಳು ಗಂಟೆಗಳ ಕಾಲ ಬೇಕು. ಪಾರ್ವತೀಬಾಯಿ ಸಂಜೆ ಆರುಗಂಟೆಗೆ ಅಲ್ಲಿಗೆ ತಲಪಿದಳು. ಆಕೆಯನ್ನು ಎದುರುಗೊಳ್ಳಲು ಮಿಸ್ ಓರೆಲಿ, ಆಕೆಯ ವೃದ್ಧ ತಾಯಿ ಮತ್ತು ಅವರ ನೆಂಟರಾದ ಕಿಂಗ್ ದಂಪತಿಗಳು ಸ್ಟೇಷನ್ನಿಗೆ ಬಂದಿದ್ದರು. ಸಮ್ಮೇಳನವು ಐದಾರು ದಿನಗಳು ನಡೆವುದಾಗಿದ್ದುದರಿಂದ ಪಾರ್ವತೀಬಾಯಿಗಾಗಿ ಒಂದು ಕೊಠಡಿಯನ್ನು ಗೊತ್ತುಮಾಡಿದ್ದರು.

ಸಮ್ಮೇಳನವು ಐದುದಿನಗಳು ನಡೆಯಿತು. ಹದಿನೆಂಟು ವಿವಿಧ ರಾಷ್ಟ್ರಗಳಿಂದ ಪ್ರತಿನಿಧಿಗಳು ಬಂದಿದ್ದರು. ಒಬ್ಬೊಬ್ಬರೂ ತಮ್ಮ ದೇಶಭಾಷೆಯಲ್ಲಿ ಒಂದು ಭಾಷಣ ಮಾಡಬೇಕಾಗಿತ್ತು. ತರುವಾಯ ಅದರ ಇಂಗ್ಲಿಷ್ ಅನುವಾದವನ್ನು ಓದುತ್ತಿದ್ದರು. ಪಾರ್ವತೀಬಾಯಿಯು ಇಂಗ್ಲಿಷಿನಲ್ಲಿ ತನ್ನ ಭಾಷಣವನ್ನು ಬರೆದು ಮರಾಠಿಯಲ್ಲಿ ಮಾತನಾಡಲು

ಸಿದ್ಧ ಮಾಡಿಕೊಂಡಳು. ಮಿಸ್ ಓರೆಲಿ ಇಂಗ್ಲಿಷ್ ಭಾಷಾಂತರ ಓದಲು ಒಪ್ಪಿಕೊಂಡರು. ಆಕೆಯೂ ಐರಿಷ್ ಮಹಿಳೆಯರ ಪರವಾಗಿ ಒಂದು ಭಾಷಣವನ್ನು ಸಿದ್ಧಮಾಡಿಕೊಂಡಿದ್ದರು. ಆದರೆ ಇದ್ದಕ್ಕಿದ್ದಂತೆಯೇ ಸ್ವಾಗತಸಮಿತಿಯವರು ಐರಿಷ್ ಮತ್ತು ಭಾರತೀಯ ಪ್ರತಿನಿಧಿಗಳ ಭಾಷಣಗಳನ್ನು ನಿಲ್ಲಿಸಿಬಿಟ್ಟರು. ಮಿಸ್ ಓರೆಲಿಯವರು ಪ್ರಯಾಸ ಪಟ್ಟು ಪಾರ್ವತೀಬಾಯಿಯ ಹೆಸರು ಪ್ರತಿನಿಧಿಗಳ ಪಟ್ಟಿಯಲ್ಲಿರುವಂತೆ ಮಾಡಿ ಬಹಳ ಗೌರವವನ್ನು ಗಳಿಸಿಕೊಟ್ಟರು. ಸಮ್ಮೇಳನದಲ್ಲಿ ಕೆಳ ಕಂಡ ನಿರ್ಣಯಗಳು ಅಂಗೀಕೃತವಾದುವು.

೧. ಹೆಂಗುಸರ ಕೆಲಸದ ಕಾಲವು ದಿನಕ್ಕೆ ಎಂಟು ಗಂಟೆಗಳಿಗೆ ಮೀರಕೂಡದು.

೨. ಸ್ತ್ರೀ ಕೆಲಸಗಾರರ ಕೂಲಿ ಹೆಚ್ಚಬೇಕು.

೩. ಕೆಲಸಗಾರರ ಮನೆಗಳ ಸ್ಥಿತಿ ಚೆನ್ನಾಗಬೇಕು.

೪. ಸ್ತ್ರೀ ಕೆಲಸಗಾರರಿಗೆ ವೈದ್ಯ ಸಹಾಯವನ್ನು ಏರ್ಪಡಿಸಬೇಕು.

೫. ಸ್ತ್ರೀ ಕೆಲಸಗಾರರಿಗೆ ರಾತ್ರಿಯ ಪಾಠಶಾಲೆಗಳನ್ನೇರ್ಪಡಿಸಬೇಕು.

೬. ಹದಿನಾಲ್ಕು ವರ್ಷಗಳಿಗಿಂತ ಕಡಿಮೆಯಾದವರನ್ನು ಕೆಲಸಕ್ಕೆ ತೆಗೆದುಕೊಳ್ಳಕೂಡದು. ವಿಧಿಯಿಲ್ಲದೆ ಅವರನ್ನು ಹಂಗಾಮಿಯಾಗಿ ತೆಗೆದುಕೊಂಡಾಗ ಅವರ ಊಟ ಉಪಚಾರಗಳಿಗೆ ಬಂಡವಾಳಗಾರರು ಸರಿಯಾದ ವ್ಯವಸ್ಥೆ ಮಾಡಬೇಕು.

೭. ಕೆಲಸ ಮಾಡುವ ಹೆಂಗುಸರ ಎಳೆಯ ಮಕ್ಕಳಿಗೆ ಬಂಡವಾಳಗಾರರು ಅನುಕೂಲಗಳನ್ನು ಮಾಡಿಕೊಡಬೇಕು.

ಸಮ್ಮೇಳನವು ಪ್ರತಿದಿನವೂ ಸಂಜೆ ಐದು ಗಂಟೆಗೆ ಮುಗಿಯುತ್ತಿತ್ತು. ಆಮೇಲೆ ಮಿಸ್ ಓರೆಲಿಯವರೂ ಅವರ ಗೆಳತಿಯರೂ ಮೋಟಾರಿನಲ್ಲಿ ಊರನ್ನು ಸುತ್ತಿ ಅನೇಕ ಸಂಸ್ಥೆಗಳನ್ನು ನೋಡಿಕೊಂಡು

ಬರುತ್ತಿದ್ದರು. ಮಿಸ್ ಓರೆಲಿಯವರು ಪಾರ್ವತೀಬಾಯಿಯನ್ನೂ ತಪ್ಪದೆ ಕರೆದುಕೊಂಡು ಹೋಗುತ್ತಿದ್ದರು. ಇದರಿಂದ ಆಕೆಗೆ ನಗರದ ಮುಖ್ಯವಾದ ನೋಟಗಳನ್ನೂ, ಅನೇಕ ವಿದ್ಯಾಸಂಸ್ಥೆಗಳನ್ನೂ ನೋಡುವ ಅವಕಾಶ ದೊರೆಯಿತು. ಅಲ್ಲದೆ ಬಹಳ ವಿಷಯಗಳು ತಿಳಿದುವು. ಆ ನಗರದ ವಿಸ್ತಾರವಾದ ಪುಸ್ತಕ ಭಂಡಾರವನ್ನೂ ಟಂಕಸಾಲೆಯನ್ನೂ ನೋಡಿದಳು. ಅಲ್ಲಿನ ಟಂಕಸಾಲೆಯ ಅಧಿಕಾರಿಗಳು, ವಿವಿಧ ರಾಷ್ಟ್ರಗಳಿಂದ ಬಂದಿದ್ದ ೫೦೦ ಸ್ತ್ರೀಪ್ರತಿನಿಧಿಗಳಿಗೆ ಒಂದು ಸತ್ಕಾರ ಕೂಟವನ್ನೇರ್ಪಡಿಸಿದ್ದರು. ಇದರಿಂದ ಪಾರ್ವತೀಬಾಯಿಗೆ ಅನೇಕರನ್ನು ಪರಿಚಯಮಾಡಿಕೊಳ್ಳುವ ಅವಕಾಶವುಂಟಾಯಿತು.

ಈ ಸಮ್ಮೇಳನದಿಂದ ಪಾರ್ವತೀಬಾಯಿಗೆ ವೈಯಕ್ತಿಕವಾಗಿ ತುಂಬ ಪ್ರಯೋಜನವಾಯಿತು. ಆಕೆಗೂ ಮಿಸ್ ಓರೆಲಿಗೂ ಬಹಳ ಸ್ನೇಹವಾಯಿತು. ಸಮ್ಮೇಳನದ ಕೊನೆಯ ದಿನ ಮಿಸ್ ಓರೆಲಿಯವರು ಪಾರ್ವತೀಬಾಯಿಯೊಡನೆ, "ನೀವು ಇಲ್ಲಿಗೆ ಬಂದುದು ಎರಡು ಉದ್ದೇಶಗಳಿಂದಲ್ಲವೇ? ಇಂಗ್ಲಿಷ್ ಕಲಿಯುವುದು, ವಿಧವಾಶ್ರಮಕ್ಕೆ ಹಣ ಕೂಡಿಸುವುದು, ಇವೆರಡೂ ಕೈಗೂಡಿದುವೇ? ನಿಮ್ಮ ಮನಸ್ಸಿಗೆ ಒಪ್ಪಿಗೆಯಾದ ಕೆಲಸವು ಇಲ್ಲಿ ಸಿಕ್ಕಿತೇ?" ಎಂದು ಕೇಳಿದರು. ಅದಕ್ಕೆ ಪಾರ್ವತೀಬಾಯಿಯು, "ನಾನು ಎಷ್ಟೋ ಪ್ರಯತ್ನಪಟ್ಟೆ, ಆದರೂ ನನಗೆ ಸರಿಯಾಗಿ ಇಂಗ್ಲಿಷ್ ಹೇಳಿಕೊಡುವವರು ಸಿಗಲಿಲ್ಲ" ಎಂದುತ್ತರ ಕೊಟ್ಟಳು. ಇದನ್ನು ಕೇಳಿ ಮಿಸ್ ಓರೆಲಿಯವರು ತಮ್ಮ ತಾಯಿಯೊಡನೆ ಮಾತಾಡಿಕೊಂಡು, "ನಮ್ಮ ತಾಯಿಯೊಡನೆ ಬ್ರೂಕ್ಲಿನ್‌ಗೆ ಹೋಗುವುದು ನಿಮಗೆ ಸಮ್ಮತವೋ?" ಎಂದು ಪಾರ್ವತೀಬಾಯಿಯನ್ನು ಕೇಳಿದರು. ಅದಕ್ಕೆ ಸಂತೋಷದಿಂದ ಒಪ್ಪಿ ಮಿಸ್ ಓರೆಲಿಯವರ ತಾಯಿಯ ಜತೆಯಲ್ಲಿ ಪಾರ್ವತೀಬಾಯಿಯು ಬ್ರೂಕ್ಲಿನ್‌ಗೆ ಹೋದಳು.

## ೨೩. ಓರೆಲಿಯವರ ಮನೆಯಲ್ಲಿ ವಾಸ

ಮಿಸ್ ಓರೆಲಿಯವರ ಮನೆಯಲ್ಲಿ ಪಾರ್ವತೀಬಾಯಿ ಬಹಳ ಸುಖವಾಗಿದ್ದಳು. ಮಿಸ್ ಓರೆಲಿಯವರಿಗೆ ಐವತ್ತಮೂರು ವರ್ಷ. ಆಕೆಯ ತಾಯಿಗೆ ಎಂಭತ್ತು ವರ್ಷ. ಓರೆಲಿಯವರ ತಂದೆ ಚಿಕ್ಕಂದಿನಲ್ಲೇ ತೀರಿಹೋದರೂ ಅವರ ತಾಯಿಯು ಮಗಳಿಗೆ ಒಳ್ಳೆಯ ವಿದ್ಯಾಭ್ಯಾಸ ಮಾಡಿಸಿದ್ದರು. ಮಿಸ್ ಓರೆಲಿಯವರು ಮದುವೆಯನ್ನೇ ಮಾಡಿಕೊಂಡವರಲ್ಲ.

ಇವರು ಬಹಳ ಸರಳ ಜೀವಿಗಳು. ಆಡಂಬರದಲ್ಲಿ ಅಪೇಕ್ಷೆಯಿಲ್ಲದಿದ್ದರೂ ಮನೆಯನ್ನು ಚೊಕ್ಕಟವಾಗಿಯೂ ಅಚ್ಚುಕಟ್ಟಾಗಿಯೂ ಇಟ್ಟಿದ್ದರು. ಮನೆಯನ್ನು ನೋಡಿದ ಮಾತ್ರದಿಂದಲೇ ಅಲ್ಲಿ ಶಾಂತಿಯೂ ಸಂತೋಷವೂ ತುಂಬಿರುವುದೆಂದು ತೋರುತ್ತಿತ್ತು. ಅವರು ಪಾರ್ವತೀಬಾಯಿಗೆ ಒಂದು ಪ್ರತ್ಯೇಕ ಕೊಠಡಿಯನ್ನು ಕೊಟ್ಟು ಆಕೆಗೆ ಬೇಕಾದುದನ್ನೆಲ್ಲ ತಾವೇ ನೋಡಿಕೊಳ್ಳುತ್ತಿದ್ದರು. ಪಾರ್ವತೀಬಾಯಿಗೆ ಇಂಗ್ಲಿಷನ್ನು ಕಲಿಯಲು ಇದ್ದ ತೀವ್ರಾಭಿಲಾಷೆಯನ್ನು ಕಂಡು ಕೂಡಲೇ ಒಂದು ಬಾಲಬೋಧೆಯನ್ನು ತಂದು ನಿತ್ಯವೂ ಪಾಠ ಹೇಳುವುದಕ್ಕೆ ಪ್ರಾರಂಭಿಸಿದರು. ಮನೆಯಲ್ಲಿ ತಾಯಿಮಕ್ಕಳಿಬ್ಬರೇ ಇದ್ದುದರಿಂದ ಕೆಲಸವು ಹೆಚ್ಚಾಗಿರಲಿಲ್ಲ. ಪಾರ್ವತೀಬಾಯಿಗೆ ಓದಿಕೊಳ್ಳಲು ತುಂಬಾ ಅವಕಾಶ ದೊರೆಯಿತು. ಅಂತೂ ಇಷ್ಟು ದಿವಸಗಳ ನಂತರ ದೇವರಿಗೆ ಆಕೆಯ ಮೇಲೆ ದಯೆ ಬಂದಿತೆನ್ನಬಹುದು. ಆಕೆಯು ತನ್ನ ಮನಸ್ಸಿನಲ್ಲಿ ಎಂತಹವರ ಸಹವಾಸವನ್ನು ಕೋರುತ್ತಿದ್ದಳೋ ಅಂತಹ ಯಜಮಾನಿಯನ್ನೇ ದೇವರು ಆಕೆಗೆ ತೋರಿಸಿದನೆನ್ನಬಹುದು.

ಮಿಸ್ ಓರೆಲಿಯವರು ಅಮೆರಿಕೆಯಲ್ಲಿದ್ದಾಗ್ಯೂ ಅವರ ಪೂರ್ವಿಕರು ಐರ್ಲೆಂಡಿನವರಾದುದರಿಂದ ಆಕೆಗೆ ಸ್ವದೇಶದ ಮೇಲೆ ತುಂಬ ಅಭಿಮಾನ. ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಆಕೆಯು ಅಮೆರಿಕೆಯಲ್ಲಿ ಹಗಲಿರುಳೂ ಶ್ರಮಿಸುತ್ತಿದ್ದರು. ಮುಖ್ಯವಾಗಿ ಬಡವರ ಮತ್ತು ಕೂಲಿ

ಗಾರರ ಸ್ಥಿತಿಗತಿಗಳನ್ನು ಉತ್ತಮಪಡಿಸುವುದಕ್ಕಾಗಿ ತಮ್ಮ ಜೀವನ ವನ್ನೇ ಧಾರೆಯೆರೆದಿದ್ದರು. ತಮ್ಮ ವ್ಯಾಸಂಗ ಪೂರಯಿಸಿದ ಮೇಲೆ ಆಕೆಯು ತಮ್ಮ ಧ್ಯೇಯಗಳಿಗನುಸಾರವಾಗಿ ಒಂದು ವಾಣಿಜ್ಯ ಶಾಲೆ ಯನ್ನು ಹೆಂಗುಸರಿಗಾಗಿ ತೆರೆದರು. ಅದನ್ನು ಹದಿನೈದು ವರ್ಷಗಳ ಕಾಲ ತಾವೇ ಬಹಳ ಸಮರ್ಪಕವಾಗಿ ನಡೆಸಿಕೊಂಡು ಬಂದರು. ಆಮೇಲೆ ಆ ಶಾಲೆಯಿಂದ ದೇಶಕ್ಕೆ ಆದ ಸಹಾಯವನ್ನು ಕಂಡು ಸರ್ಕಾರದವರೇ ಅದರ ಆಡಳಿತವನ್ನು ವಹಿಸಿದರು. ಈ ಶಾಲೆಯಲ್ಲಿ ಹೆಂಗುಸರಿಗೆ ಮುಖ್ಯವಾಗಿ ಬೇಕಾದ ಹೊಲಿಗೆ, ಕಸೂತಿ, ನೆಯ್ಗೆ, ಅಡಿಗೆ, ಗೃಹಕಾರ್ಯ ನಿರ್ವಹಣ ಮತ್ತು ಕಛೇರಿ ಕೆಲಸ ಇವುಗಳನ್ನು ಕಲಿಸುತ್ತಿದ್ದರು. ಇವುಗಳ ಪೈಕಿ ವಿದ್ಯಾರ್ಥಿನಿಯರು ತಮಗೆ ಇಷ್ಟ ವಾದುವನ್ನು ಆರಿಸಿಕೊಂಡು ವ್ಯಾಸಂಗಮಾಡಿ ಪ್ರಶಸ್ತಿಗಳನ್ನು ಪಡೆಯು ತ್ತಿದ್ದರು. ಅಲ್ಲಿ ಸುಮಾರು ೧೫೦೦ ಮಂದಿ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದರು. ಆಕೆಯು ಇನ್ನೂ ಎಷ್ಟೋ ಸಾರ್ವಜನಿಕ ಕಾರ್ಯಗಳನ್ನು ಮಾಡುತ್ತಿದ್ದರೂ ಐರ್ಲೆಂಡಿಗೆ ಸ್ವಾತಂತ್ರ್ಯ ಸಂಪಾದನೆ, ಕೂಲಿಗಾರರ ಉದ್ಧಾರ ಇವುಗಳೇ ಆಕೆಯ ಮನಸ್ಸಿಗೆ ಎಲ್ಲಕ್ಕಿಂತಲೂ ಮುಖ್ಯವಾಗಿ ತೋರುತ್ತಿದ್ದುವು. "ಜನಸೇವೆಯೇ ಜನಾರ್ಧನ ಸೇವೆ" ಎಂಬುದು ಆಕೆಯ ಸೇವೆಯ ತತ್ವ. ಆಕೆಯದು ವಿಶಾಲ ಹೃದಯ. ಪಂಗಡದ ಭೇದಭಾವಗಳಾಗಲಿ ರಾಷ್ಟ್ರೀಯ ಭೇದಭಾವಗಳಾಗಲಿ ಆಕೆಗೆ ಒಪ್ಪುತ್ತಿರಲಿಲ್ಲ. ಎಲ್ಲ ರಾಷ್ಟ್ರಗಳೂ ಒಗ್ಗಟ್ಟಿನಿಂದ ಸಹಕರಿಸ ದಿದ್ದಲ್ಲಿ ಅಂತರ್ರಾಷ್ಟ್ರೀಯ ಸಮಸ್ಯೆಗಳು ಬಗೆಹರಿಯಲಾರವೆಂಬುದೇ ಆಕೆಯ ಮತ.

ಮಿಸ್ ಓರೆಲಿಯುವರ ತಾಯಿಗೆ ಎಂಬತ್ತು ವರ್ಷ ದಾಟಿದ್ದರೂ ನಿತ್ಯವೂ ಎಂಟುಗಂಟೆಗಳ ಕಾಲವನ್ನು ಓದುವುದರಲ್ಲಿ ಕಳೆಯುತ್ತಿದ್ದರು. ಮಗಳು ಹೊರಗಿನ ಕೆಲಸಕಾರ್ಯಗಳನ್ನು ಮುಗಿಸಿಕೊಂಡು ಮನೆಗೆ ಬಂದಮೇಲೆ ಈಕೆಯು ಮಗಳಿಗೆ ತಾವು ಓದಿದ ಮುಖ್ಯ ಸಂಗತಿಗಳನ್ನು ತಿಳಿಸುತ್ತಿದ್ದರು. ಊಟಕ್ಕೆ ಕುಳಿತಾಗ ಇವರಿಬ್ಬರೂ ಪತ್ರಿಕೆಗಳಲ್ಲಿನ ಮುಖ್ಯ ವಿಷಯಗಳನ್ನು ಚರ್ಚಿಸುತ್ತಿದ್ದರು. ಈ ಚರ್ಚೆಗಳನ್ನು ಕೇಳು

ವುದರಿಂದಲೇ ಪಾರ್ವತೀಬಾಯಿಗೆ ಸ್ವತಃ ಪತ್ರಿಕೆಗಳನ್ನು ಓದದಿದ್ದರೂ ಅನೇಕ ವಿಷಯಗಳು ಚೆನ್ನಾಗಿ ತಿಳಿಯುತ್ತಿದ್ದುವು. ಓರೆಲಿಯವರಿಗೆ ಅವರ ತಾಯಿಯಲ್ಲಿ ಅಚಲವಾದ ಭಕ್ತಿ. ಆಕೆಯ ಕೆಲಸಗಳನ್ನೆಲ್ಲ ತಾವೇ ನೋಡಿಕೊಳ್ಳುತ್ತಿದ್ದರು.

ಮಿಸ್ ಓರೆಲಿಯವರು, ತಾವು ಮದುವೆ ಮಾಡಿಕೊಳ್ಳಲಿಲ್ಲವಲ್ಲಾ ಎಂದು ಯಾವಾಗಲೂ ಪೇಚಾಡಿದವರಲ್ಲ. ಅನಾಥ ಮಕ್ಕಳಲ್ಲಿ ಆಕೆಗೆ ತುಂಬಾ ಪ್ರೀತಿ. ನಮ್ಮ ಜನರಲ್ಲಿ ಬಹಳ ಚಿಕ್ಕ ವಯಸ್ಸಿನಲ್ಲೇ ಗಂಡನನ್ನು ಕಳೆದುಕೊಂಡವರು ಕೂಡ ಯಾವಾಗಲೂ ವ್ಯಸನದಿಂದ ಸೊರಗುತ್ತಿರುತ್ತಾರೆ. ಇವರ ಪೋಷಕರೂ ಸಹ ಇವರ ಗತಿ ಹೀಗಾಯಿತಲ್ಲಾ ಎಂದು ಸದಾ ಕೊರಗುತ್ತಿರುತ್ತಾರೆ. ಆದರೆ ಅಮೆರಿಕೆಯಲ್ಲಿ ಹಾಗಲ್ಲ. ಅವರು ಈ ವಿಧವಾದ ಕಷ್ಟಗಳು ಬಂದಾಗ ಅವನ್ನು ಧೈರ್ಯದಿಂದ ಸಹಿಸಿ ಸ್ವಾರ್ಥವನ್ನು ಬಿಟ್ಟು ಜನೋಪಯುಕ್ತ ಕಾರ್ಯಗಳಲ್ಲಿಯೇ ತಮ್ಮ ಜೀವನವನ್ನು ಸವೆಸಬೇಕೆಂದು ಸಂಕಲ್ಪಿಸಿಕೊಂಡು ಕಾರ್ಯರಂಗಕ್ಕೆ ಇಳಿಯುತ್ತಾರೆ. ಅಮೆರಿಕ ಜನರಿಂದ ನಮ್ಮ ಮಹಿಳೆಯರು ಗ್ರಹಿಸಬೇಕಾದ ಅನೇಕ ಸದ್ಗುಣಗಳ ಪೈಕಿ ಇದು ಮೊದಲನೆಯದೆನ್ನಬಹುದು.

ಮಿಸ್ ಓರೆಲಿಯವರು ಪಾರ್ವತೀಬಾಯಿಗೆ ಇಂಗ್ಲಿಷನ್ನು ಎಂಟು ತಿಂಗಳು ಮಾತ್ರ ಹೇಳಿಕೊಟ್ಟರು. ಆಕೆಗೆ ಸಾರ್ವಜನಿಕ ಕಾರ್ಯಗಳು ಅಧಿಕವಾಗಿದ್ದುದರಿಂದ ಪಾಠ ಹೇಳಲು ವಿರಾಮ ಸಿಕ್ಕುತ್ತಿರಲಿಲ್ಲ. ಆದರೆ ಪಾರ್ವತೀಬಾಯಿಗೆ ಅನೇಕರನ್ನು ಕಾಣುವುದಕ್ಕೂ ಮಾತನಾಡುವುದಕ್ಕೂ ಅವಕಾಶ ದೊರೆತುದರಿಂದ ಆಕೆಗೆ ಇಂಗ್ಲಿಷ್ ಚೆನ್ನಾಗಿ ಬಂತು. ಪ್ರತಿದಿನವೂ ಬೆಳಗಿನ ಹೊತ್ತು ಪಾರ್ವತೀಬಾಯಿ ಮನೆಯ ಕೆಲಸಗಳನ್ನು ಮಾಡುತ್ತಿದ್ದಳು. ಮಧ್ಯಾಹ್ನ ಮತ್ತು ಸಾಯಂಕಾಲಗಳ ವೇಳೆಯಲ್ಲಿ ಆಕೆಯು ಪರಿಚಯವಿದ್ದ ಮಹಿಳೆಯರ ಮನೆಗಳಿಗಾಗಲಿ ಸಭೆಗಳಿಗಾಗಲಿ ಹೋಗುತ್ತಿದ್ದಳು. ಆಕೆಯು ಅಂತರಾಷ್ಟ್ರೀಯ ಕೆಲಸಗಾರರ ಸಮ್ಮೇಳನಕ್ಕೆ ಹೋಗಿ ಬಂದಮೇಲೆ ನ್ಯೂಯಾರ್ಕಿನ ಸಾಮಾಜಿಕ ಮುಖಂಡರ ಮತ್ತು ಶಿಕ್ಷಣ ನಿಪುಣರ ಪರಿಚಯವು ಆಕೆಗೆ ಚೆನ್ನಾಗಿ

ಆಯಿತು. ಅವರು ಪಾರ್ವತೀಬಾಯಿಯನ್ನು ಸಂತೋಷ ಕೂಟಗಳಿಗೂ ಸಭೆಗಳಿಗೂ ಆಹ್ವಾನಿಸುತ್ತಿದ್ದರು. ಪಾರ್ವತೀಬಾಯಿಯು ತಪ್ಪದೆ ಅವೆಲ್ಲಕ್ಕೂ ಹೋಗುತ್ತಿದ್ದಳು. ಸಂದರ್ಭವೊದಗಿದಾಗಲೆಲ್ಲ ಆಕೆಯು ವಿಧವಾಶ್ರಮಕ್ಕಾಗಿ ಕೆಲಸ ಮಾಡುವುದಕ್ಕೆ ಅವಕಾಶ ದೊರೆಯಿತು. ಇದರಿಂದ ಪಾರ್ವತೀಬಾಯಿಗೆ ನ್ಯೂಯಾರ್ಕಿನ ಪ್ರಮುಖ ಮತ್ತು ಧನಿಕ ಮಹಿಳೆಯರ ಪರಿಚಯವಾದುದು ಮಾತ್ರವೇ ಅಲ್ಲದೆ ಅಮೆರಿಕೆಯ ಮಹಿಳೆಯರು ಸಾಮಾಜಿಕ ಕೆಲಸಗಳನ್ನು ಯಾವರೀತಿ ಕೈಗೊಂಡು ನಡೆಯಿಸಿಕೊಂಡು ಬರುತ್ತಾರೆ ಎಂಬುದು ಚೆನ್ನಾಗಿ ತಿಳಿಯಿತು. ಮಿಸ್ ಓರೆಲಿಯವರು ಕೂಲಿಗಾರರ ಏಳಿಗೆಗಾಗಿ ಶ್ರಮಿಸುವವರಲ್ಲಿ ಪ್ರಮುಖ ರಾಗಿದ್ದುದರಿಂದ ಆಕೆಯನ್ನು ಅನೇಕ ಸಮಾರಂಭಗಳಿಗೆ ಆಹ್ವಾನಿಸು ತ್ತಿದ್ದರು. ಸಾಧ್ಯವಾದಾಗಲೆಲ್ಲಾ ಆಕೆಯು ಪಾರ್ವತೀಬಾಯಿಯನ್ನು ತಮ್ಮೊಡನೆ ಕರೆದುಕೊಂಡು ಹೋಗಿ ಅನೇಕರ ಪರಿಚಯ ಮಾಡಿಸು ತ್ತಿದ್ದರು. ಕೆಲವು ವೇಳೆ ಆಕೆಯೇ ತಮ್ಮ ಮನೆಯಲ್ಲಿ ಕೂಟಗಳನ್ನೇ ರ್ಪಡಿಸಿ ಹಲವು ಮಿತ್ರರನ್ನು ಕರೆಯುತ್ತಿದ್ದರು. ಆಗಲೂ ಪಾರ್ವತೀ ಬಾಯಿಗೆ ಹಲವರ ಪರಿಚಯವಾಗುತ್ತಿತ್ತು.

ನ್ಯೂಯಾರ್ಕಿನಲ್ಲಿ 'ಸೊರೋಸಿಸ್ ಕ್ಲಬ್' ಎಂಬ ಸಂಘವೊಂದಿದೆ. ಅದರ ಸದಸ್ಯರೆಲ್ಲರೂ ಸ್ವತಂತ್ರವಾಗಿ ಜೀವನ ನಡೆಸಿಕೊಳ್ಳುವ ಮಹಿಳೆ ಯರು. ಅಮೆರಿಕೆಯಲ್ಲಿ ಆ ಸಂಘಕ್ಕೆ ಬಹಳ ಖ್ಯಾತಿಯಿದೆ. ಅದರಲ್ಲಿ ಮಾತನಾಡುವುದೇ ಒಂದು ಗೌರವ. ಒಂದು ಸಲ, ಈ ಸಂಘದ ಸಭೆ ಯೊಂದು ನ್ಯೂಯಾರ್ಕಿನ ಜಗದ್ವಿಖ್ಯಾತವಾದ 'ವಾಲ್ಡಾರ್ಫ್ ಆಸ್ಟೋ ರಿಯಾ' ಎಂಬ ಹೊಟೆಲಿನಲ್ಲಿ ಜರುಗಿತು. ಅದರಲ್ಲಿ ಪಾರ್ವತೀಬಾಯಿಯು ಸ್ತ್ರೀ ವಿದ್ಯಾಭ್ಯಾಸವನ್ನು ಹರಡಲು ಪ್ರೊ|| ಕರ್ವೆಯವರು ಮಾಡುತ್ತಿರುವ ಪ್ರಯತ್ನಗಳನ್ನೂ, ಹಿಂಗಣೆಯಲ್ಲಿ ಅವರು ಸ್ಥಾಪಿಸಿರುವ ಸಂಸ್ಥೆಗಳನ್ನೂ ಕುರಿತು ಭಾಷಣ ಮಾಡಿದರು.

ಒಂದು ಸಲ ಪಾರ್ವತೀಬಾಯಿಯು ಮಹಿಳೆಯರ ಸಭೆಯೊಂದ ರಲ್ಲಿ ಮಾತನಾಡುತ್ತ ಪ್ರೊ|| ಕರ್ವೆಯವರು ಬಹಳ ದೂರ ನಡೆಯ ಬೇಕಾಗಿದೆಯೆಂದೂ, ಅದರಿಂದ ಅವರಿಗೆ ಕೆಲವು ವೇಳೆ ಬಹಳ ತೊಂದರೆ

ಯುಂಟಾಗುತ್ತದೆಂದೂ ತಿಳಿಸಿದಳು. ಆಗ ಒಬ್ಬ ಮಹಿಳೆಯು, "ಪ್ರೊ|| ಕರ್ವೆಯವರು ಮೋಟಾರೊಂದನ್ನು ಇಟ್ಟುಕೊಳ್ಳಬಾರದೇಕೆ?" ಎಂದು ಕೇಳಿದರು. ಕೇವಲ ಚಂದಾಹಣದಿಂದಲೇ ಆ ಸಂಸ್ಥೆ ಜರುಗಿಸುತ್ತಿರುವವರಿಗೆ ಅದೆಲ್ಲ ಹೇಗೆ ಸಾಧ್ಯವೆಂದು ಪಾರ್ವತೀಬಾಯಿಯು ತಿಳಿಸಿದಳು. ಆಗ ಮತ್ತೊಬ್ಬ ಮಹಿಳೆಯು "ನಾವು ಒಂದು ಮೋಟಾರನ್ನು ಕಳುಹಿಸಿಕೊಟ್ಟರೆ ಪ್ರೊ|| ಕರ್ವೆಯವರು ಸ್ವೀಕರಿಸುವರೇ?" ಎಂದು ಕೇಳಿದರು. ಅದಕ್ಕೆ ಪಾರ್ವತೀಬಾಯಿಯು "ಓಹೋ, ಸ್ವೀಕರಿಸದೆ ಏನು!" ಎಂದಳು. ಪಾರ್ವತೀಬಾಯಿಯು ಆ ವಿಷಯವನ್ನು ಅಲ್ಲಿಗೇ ಮರೆತುಬಿಟ್ಟಳು. ಆದರೆ ಆ ಮಹಿಳೆಯರೆಲ್ಲರೂ ಶ್ರದ್ಧೆಯಿಂದ ಹಣ ಕೂಡಿಸಿ, ಒಂದು ಮೋಟಾರನ್ನು ಕೊಂಡು ಪ್ರೊ|| ಕರ್ವೆಯವರಿಗೆ ಕಳುಹಿಸಿಕೊಟ್ಟರು. ಈಗಲೂ ಆ ಯಂತ್ರವನ್ನು ಮಹಿಳಾ ವಿದ್ಯಾಲಯದಲ್ಲಿ ಉಪಯೋಗಿಸುತ್ತಾರೆ. ಹೀಗೆ ಪಾರ್ವತೀಬಾಯಿಗೆ ಆ ಪಟ್ಟಣದ ಅನೇಕ ಸಂಸ್ಥೆಗಳಲ್ಲಿ ಮಾತನಾಡಲು ಅವಕಾಶ ದೊರೆಯುತ್ತಿದ್ದುದರಿಂದ ಪ್ರೊ|| ಕರ್ವೆಯವರ 'ವಿಧವಾಶ್ರಮ' ಮತ್ತು 'ಮಹಿಳಾ ವಿದ್ಯಾಲಯ'ದ ಧ್ಯೇಯಗಳನ್ನು ಚೆನ್ನಾಗಿ ವಿವರಿಸಿ ಅವುಗಳಿಗಾಗಿ ಹಣ ಶೇಖರಿಸಲು ಒಳ್ಳೆಯ ಅವಕಾಶ ಸಿಕ್ಕಿತು. ಆಕೆಯು ಅಲ್ಲಿ ಸುಮಾರು ಮೂರುಸಾವಿರ ರೂಪಾಯಿಗಳನ್ನು ಕೂಡಿಸಿದಳು. ಈ ಕೆಲಸಗಳಿಗೆಲ್ಲ ಪಾರ್ವತೀಬಾಯಿಯನ್ನು ಪ್ರೋತ್ಸಾಹಿಸಿ ಆಕೆಗೆ ಸಹಾಯ ಮಾಡಿದವರು ಮಿಸ್ ಓರೆಲಿ. ಪಾರ್ವತೀಬಾಯಿಗೆ ಆಕೆಯಲ್ಲಿ ಪೂಜ್ಯಭಾವವೂ, ಭಕ್ತಿಯೂ ಉಂಟಾಯಿತು. ಮಿಸ್ ಓರೆಲಿಯವರನ್ನು ಪಾರ್ವತೀಬಾಯಿಯು ಗುರುವೆಂದೇ ಭಾವಿಸಿದಳು.

ಆ ವೇಳೆಗೆ ಸರಿಯಾಗಿ ನಮ್ಮ ದೇಶದಲ್ಲಿ ಮಹಾತ್ಮಾ ಗಾಂಧಿಯವರ ಅಸಹಕಾರ ಚಳುವಳಿಯು ಪ್ರಾರಂಭವಾಗಿದ್ದಿತು. ಮಹಾತ್ಮರು ಬರೆದಿದ್ದ "ಅಸಹಕಾರ ಕೈಪಿಡಿ"ಯನ್ನು ಯಂಗ್ ಇಂಡಿಯಾ ಕಛೇರಿಯವರು ಅಮೆರಿಕೆಯಲ್ಲಿ ಹಂಚಲು ತರಿಸಿಕೊಂಡಿದ್ದರು. ಅವುಗಳಲ್ಲಿ ಕೆಲವನ್ನು ಪಾರ್ವತೀಬಾಯಿ ಹಂಚಲು ತಂದು ಮಿಸ್ ಓರೆಲಿಯವರಿಗೂ ಒಂದನ್ನು ಕೊಟ್ಟಳು. ಅದನ್ನು ಓದಿದುದರಿಂದ ಭಾರತದ ರಾಜ

ಕೀಯ ಹೋರಾಟ, ಪ್ರಜೆಗಳ ಅತೃಪ್ತಿ, ಈ ವಿವರಗಳು ಆಕೆಗೆ ಚೆನ್ನಾಗಿ ತಿಳಿದುವು. ಮಹಾತ್ಮರು, ಭಾರತ ಸ್ವಾತಂತ್ರ್ಯಕ್ಕೆ ಬ್ರಿಟಿಷ್ ಬಟ್ಟೆಯ ಬಹಿಷ್ಕಾರವು ಆವಶ್ಯಕವೆಂದು ಹೇಳಿರುವಂತೆಯೇ ಐರ್ಲೆಂಡಿನವರು ಬ್ರಿಟಿಷ್ ಟೀಯನ್ನು ಏಕೆ ಬಹಿಷ್ಕರಿಸಬಾರದು? ಎಂದು ಮಿಸ್ ಓರೆಲಿಯವರಿಗೆ ಹೊಳೆಯಿತು. ಕೂಡಲೆ ಅಮೆರಿಕೆಯಲ್ಲಿದ್ದ ಐರಿಷ್ ಜನಾಂಗದವರೆಲ್ಲರಿಗೂ ಈ ವಿಷಯವನ್ನು ತಿಳಿಸಿ ಬ್ರಿಟಿಷ್ ಟೀ ಬಹಿಷ್ಕಾರ ಚಳುವಳಿಯನ್ನು ಪ್ರಾರಂಭಿಸಿಯೇ ಬಿಟ್ಟರು. ನ್ಯೂಯಾರ್ಕಿನಲ್ಲಿ ಅನೇಕ ಕುಟುಂಬಗಳವರು ಇಂಗ್ಲಿಷ್ ಟೀಯನ್ನು ಬಿಟ್ಟು ಹಾಲೆಂಡಿನ ಟೀಯನ್ನು ಕೊಳ್ಳುವುದಕ್ಕೆ ಮೊದಲುಮಾಡಿ, ಈ ವ್ಯಾಪಾರದಲ್ಲಿ ಉಳಿತಾಯವಾದ ಒಂದು ಸಾವಿರ ಡಾಲರುಗಳನ್ನು ಐರ್ಲೆಂಡಿನ ಸಹಾಯಾರ್ಥವಾಗಿ ಕಳುಹಿಸಿಕೊಟ್ಟರು.

ಪಾರ್ವತೀಬಾಯಿಯು ಮಿಸ್ ಓರೆಲಿಯವರ ಮನೆಯಲ್ಲಿ ಒಂದೂ ಕಾಲು ವರ್ಷಗಳನ್ನು ಸಂತೋಷವಾಗಿ ಕಳೆದಳು. ಮಿಸ್ ಓರೆಲಿಯವರಲ್ಲಿ ಈಕೆಗೆ ಗೌರವವೂ ಪ್ರೀತಿಯೂ ದಿನೇದಿನೇ ಹೆಚ್ಚುತ್ತ ಬಂತು. ಮಿಸ್ ಓರೆಲಿಯವರೂ ಅವರ ತಾಯಿಯೂ ಪಾರ್ವತೀಬಾಯಿಯನ್ನು ಕಡೆಯವರೆಗೂ ತಮ್ಮಲ್ಲೇ ಇದ್ದು ಬಿಡಬೇಕೆಂದು ಒತ್ತಾಯ ಮಾಡುತ್ತಿದ್ದರು. ಆದರೆ ಪಾರ್ವತೀಬಾಯಿಯು ಅಮೆರಿಕೆಗೆ ಬಂದ ಉದ್ದೇಶವು ಆಗಲೇ ಕೈಗೂಡಿದ್ದಿತು. ಇನ್ನು ಸ್ವದೇಶಕ್ಕೆ ಹಿಂದಿರುಗಿ ಮಿಕ್ಕ ಕಾಲವನ್ನೆಲ್ಲಾ ತನ್ನ ಮಮತೆಯ 'ವಿಧವಾಶ್ರಮ'ದ ಸೇವೆಯಲ್ಲಿ ಕಳೆಯಬೇಕು ಎಂದು ಅವಳ ಅಂತರಾತ್ಮನು ನುಡಿದಂತಾಯಿತು. ಆ ವೇಳೆಗೆ ಪ್ರೊ|| ಕರ್ವೆಯವರೂ ಆಕೆಗೆ ಹಿಂದಿರುಗುವಂತೆ ಕಾಗದ ಬರೆದರು. ಈ ವಿಷಯವು ಮಿಸ್ ಓರೆಲಿಯವರಿಗೂ ಅವರ ತಾಯಿಯವರಿಗೂ ತಿಳಿಯಿತು. ಅವರು ಈಕೆಯನ್ನು ಬಿಡುವುದಕ್ಕೆ ಇಷ್ಟಪಡದಿದ್ದರೂ ಸಮುದ್ರಯಾನಕ್ಕೆ ಬೇಕಾದ ಅನುಕೂಲತೆಗಳನ್ನು ಒದಗಿಸಿಕೊಟ್ಟರು. ಪಾರ್ವತೀಬಾಯಿ ಹೊರಡುವ ವಿಷಯವನ್ನು ಕೇಳಿ ನ್ಯೂಯಾರ್ಕಿನ ಸ್ನೇಹಿತರೆಲ್ಲರೂ ಆಕೆಯ ಗೌರವಾರ್ಥವಾಗಿ ಅನೇಕ ಸಂತೋಷಕೂಟಗಳನ್ನು ಏರ್ಪಡಿಸಿ ಆಕೆಯನ್ನು ಬೀಳ್ಕೊಟ್ಟರು. ಪಾರ್ವತೀಬಾಯಿಯು ತನಗೆ ಪುನಃ ಇವ

ರನ್ನು ನೋಡುವ ಸಂಭವ ದೊರೆಯಲಾರದೆಂದು ಅವರೆಲ್ಲರನ್ನೂ ಮನಃ ಪೂರ್ವಕವಾಗಿ ವಂದಿಸಿ ತನ್ನ ಕೃತಜ್ಞತೆಯನ್ನು ಹೇಳಿಕೊಂಡಳು.

ಪಾರ್ವತೀಬಾಯಿಯು ವೈಟ್‌ಸ್ಟಾರ್ ಎಸ್. ಎಸ್. ಒಲಿಂಪಿಕ್ ಎಂಬ ಜಹಜಿನಲ್ಲಿ ೧೯೨೦ ನೆಯ ಏಪ್ರಿಲ್ ೨೦ ನೆಯ ತಾರೀಖಿನ ದಿವಸ ಪ್ರಯಾಣಮಾಡಿದಳು. ಬಂದರಿನಲ್ಲಿ ಆಕೆಯನ್ನು ಬೀಳ್ಕೊಡಲು ಮಿಸ್ ಓರೆಲಿ, ಅವರ ತಾಯಿ, ಮಿಸೆಸ್ ಷಾಹೆ ಮತ್ತು ಭಾರತೀಯ ವಿದ್ಯಾರ್ಥಿ ಗಳೇ ಮೊದಲಾದ ಅನೇಕ ಸ್ನೇಹಿತರು ಬಂದಿದ್ದರು. ಪ್ರತಿಯೊಬ್ಬರೂ ತಮ್ಮತಮ್ಮ ಜ್ಞಾಪಕಾರ್ಥವಾಗಿ ಪಾರ್ವತೀಬಾಯಿಗೆ ಉಪಯುಕ್ತವಾದ ಪುಸ್ತಕಗಳೇ ಮುಂತಾದ ವಸ್ತುಗಳನ್ನು ತಂದುಕೊಟ್ಟರು. ಎಲ್ಲರ ಹರ್ಷ ಧ್ವನಿಗಳ ಮಧ್ಯೆ ಜಹಜು ರೇವನ್ನು ಬಿಟ್ಟಿತು. ಪಾರ್ವತೀಬಾಯಿಗೆ ಇಷ್ಟುದಿವಸವೂ ಅನೇಕ ವಿಧದಲ್ಲಿ ಸಹಾಯ ಮಾಡಿದ ಸ್ನೇಹಿತರ ಸವಿ ನೆನಪುಗಳು ಬಂದು ಅವರನ್ನೆಲ್ಲ ಪುನಃ ನೋಡುವ ಸಂಭವವಿಲ್ಲವಲ್ಲಾ ಎಂದು ಕಣ್ಣುಗಳು ಹನಿಗೂಡಿದವು. ಕೂಡಲೆ ಸ್ವದೇಶಕ್ಕೆ ಹಿಂದಿರುಗು ತ್ತಿರುವೆನಲ್ಲಾ ಎಂಬ ಭರವಸೆಯುಲ್ಲಿ ಆ ದುಃಖವನ್ನು ಮರೆತು ತನ್ನ ಕೊಠಡಿಗೆ ಹೋಗಿ ಸಾಮಾನುಗಳನ್ನುಅಣಿಮಾಡುವುದರಲ್ಲಿ ತೊಡಗಿದಳು.

## ೨೪. ಮತ್ತೆ ಮಾತೃದೇಶದಲ್ಲಿ

ಒಲಿಂಪಿಕ್ ಜಹಜು ಬಹಳ ದೊಡ್ಡದು. ಪ್ರಯಾಣಿಕರಿಗೆ ಬೇಕಾದ ಎಲ್ಲ ಸೌಕರ್ಯಗಳೂ ತೃಪ್ತಿಕರವಾಗಿದ್ದುವು. ಪಾರ್ವತೀಬಾಯಿಗೆ ಸಮುದ್ರಯಾನದ ಅನುಭವವು ಚೆನ್ನಾಗಿ ಆಗಿದ್ದುದರಿಂದ ಈ ಸಲದ ಪ್ರಯಾಣದಲ್ಲಿ ಆಕೆಗೆ ಕಷ್ಟತೋರಲಿಲ್ಲ. ಪಾರ್ವತೀಬಾಯಿಯ ಸಂಗಡ ಅದೇ ಕೊಠಡಿಯಲ್ಲಿ ಡಾ|| ಬಹದ್ದೂರ್ಜಿ ಎಂಬ ಪಾರ್ಸಿ ಮಹಿಳೆಯೊಬ್ಬರು ಪ್ರಯಾಣ ಮಾಡುತ್ತಿದ್ದರು. ಈಕೆಯ ಸ್ನೇಹವು ಪಾರ್ವತೀಬಾಯಿಗೆ ತುಂಬ ಹಿತಕರವಾಗಿತ್ತು. ಒಂದು ವಾರದಮೇಲೆ ಜಹಜು ಲಿವರ್ ಪೂಲ್ ರೇವನ್ನು ತಲಪಿತು. ಡಾ|| ಬಹದ್ದೂರ್ಜಿಯವರೊಡನೆ ಪಾರ್ವತೀ ಬಾಯಿಯು ರೈಲಿನಲ್ಲಿ ಲಂಡನ್ನಿಗೆ ಹೋಗಿ ಒಂದು ಹಿಂದೂ ವಸತಿಗೃಹ ದಲ್ಲಿ ಬಿಡಾರ ಮಾಡಿದಳು. ಈ ವಸತಿಗೃಹದಲ್ಲೇ "ವಿಧವಾಶ್ರಮ"ದ ವಿದ್ಯಾರ್ಥಿನಿಯಾಗಿದ್ದ ದ್ವಾರಕಾ ಬಾಲಚಂದ್ರ ಎಂಬಾಕೆಯು ಇದ್ದಳು. ಈಕೆಯಿಂದ ಪಾರ್ವತೀಬಾಯಿಗೆ ತುಂಬ ಸಹಾಯವಾಯಿತು.

ಲಂಡನ್ನಲ್ಲೇ ಕೆಲವುಕಾಲವಿದ್ದು ಮುಖ್ಯವಾದ ಸ್ಥಳಗಳನ್ನೆಲ್ಲಾ ನೋಡಿಕೊಂಡು, ಸಾಧ್ಯವಾದಷ್ಟು "ವಿಧವಾಶ್ರಮ"ದ ಕೆಲಸವನ್ನೂ ಮಾಡಬೇಕೆಂದು ಪಾರ್ವತೀಬಾಯಿಯು ಯೋಚಿಸಿದ್ದಳು. ಸ್ವಲ್ಪ ಕಾಲ ದಲ್ಲಿಯೆ ಅಮೆರಿಕಕ್ಕಿಂತಲೂ ಇಂಗ್ಲೆಂಡಿನಲ್ಲಿರುವುದು ತುಂಬ ಅನನುಕೂಲ ವಾಗಿಯೂ ದುಬಾರಿಯಾಗಿಯೂ ತೋರಿತು. ಒಬ್ಬ ಪಂಜಾಬಿ ಬ್ಯಾರಿಸ್ಟರರ ಸಹಾಯದಿಂದ ಪಾರ್ವತೀಬಾಯಿ ಲಂಡನ್ನಿನಲ್ಲಿ ಐದು ವಾರಗಳು ಇರುವಂತಾಯಿತು. ಪಾರ್ವತೀಬಾಯಿಯು ಲಂಡನ್ನಿನಲ್ಲಿದ್ದ ಒಬ್ಬ ಭಾರತೀಯ ಗೃಹಸ್ಥನ ಮನೆಯಲ್ಲಿ ವಿಧವಾಶ್ರಮವನ್ನು ಕುರಿತು ಒಂದು ಉಪನ್ಯಾಸ ಮಾಡಿದಳು. ಇದರ ಪರಿಣಾಮವಾಗಿ ೨೦ ಪೌಂಡು ಕೈ ಸೇರಿತು. ಭಾರತ ಹಿತೈಷಿಗಳಾದ ಮಿ|| ಪೋಲಕ್ ಮುಂತಾದವರನ್ನು ಸಂದರ್ಶಿಸುವ ಅವಕಾಶವು ಆಕೆಗೆ ದೊರೆಯಿತು. ಬ್ರಿಟಿಷ್ ಮ್ಯೂಸಿಯಂ ಬಕಿಂಗ್ಹ್ಯಾಮ್ ಅರಮನೆ ಮುಂತಾದುವನ್ನು ನೋಡಿಕೊಂಡು ಪ್ಯಾರಿ ಸ್ಸಿಗೆ ಹೊರಟಳು.

ಪ್ಯಾರಿಸ್ಸಿನಲ್ಲಿ ಪಾರ್ವತೀಬಾಯಿಯು ಒಬ್ಬ ಗುಜರಾತೀ ಮುತ್ತಿನ ವ್ಯಾಪಾರಿಯ ಮನೆಯಲ್ಲಿ ಇಳಿದುಕೊಂಡಳು. ಈತನು ಪಾರ್ವತೀ ಬಾಯಿಯು ಅಮೆರಿಕೆಯಲ್ಲಿದ್ದಾಗ ಆಕೆಯನ್ನು ಪ್ಯಾರಿಸ್ಸಿಗೆ ಕರೆದಿದ್ದನು. ಇವರ ಮನೆಯಲ್ಲಿ ಐದು ವಾರಗಳನ್ನು ಪಾರ್ವತೀಬಾಯಿಯು ಸಂತೋಷ ವಾಗಿ ಕಳೆದಳು. ಈ ಗುಜರಾತಿ ಬಂಧುವಿನ ಸಹಾಯದಿಂದ ಪಾರ್ವತೀ ಬಾಯಿಯು ಪ್ಯಾರಿಸ್ಸಿನ ಅನೇಕ ಗಣ್ಯರನ್ನು ನೋಡಿದಳು. ಫ್ರೆಂಚರಿಗೆ ಭಾರತೀಯರಲ್ಲಿ ಬಹಳ ಸಹಾನುಭೂತಿ.

ಹಿಂದೂ ಸ್ತ್ರೀ ಪ್ರಯಾಣಿಕರಿಗೆ ಸಹಾಯ ಮಾಡಲು, ಪಾರ್ವತೀ ಬಾಯಿಯ ಸಲಹೆಯಂತೆ, ಒಂದು ಸಂಘವನ್ನು ಸ್ಥಾಪಿಸಿದರು. ಇದಕ್ಕೆ ದಾದಾಭಾಯಿ ನವರೋಜಿಯವರ ಮೊಮ್ಮಗಳಾದ ಮಿಸ್ ನವರೋಜಿ ಯವರು ಕಾರ್ಯದರ್ಶಿಯಾದರು.

ಪಾರ್ವತೀಬಾಯಿಯು ಇಲ್ಲಿಯೂ ವಿಧವಾಶ್ರಮಕ್ಕೆ ಸಾಧ್ಯವಾ ದಷ್ಟು ಹಣವನ್ನು ಶೇಖರಿಸಬೇಕೆಂದಿದ್ದಳು. ಆದರೆ ಆಗ ಕವಿ ರವೀಂದ್ರ ನಾಥ ಠಾಕೂರರು ಪ್ಯಾರಿಸ್ಸಿನ ಮೂಲಕ ಪ್ರಯಾಣ ಮಾಡುವವರಾಗಿ ದ್ದರು. ಅವರನ್ನು ಸ್ವಾಗತಿಸುವುದಕ್ಕಾಗಿ ಈಗಾಗಲೇ ತುಂಬ ಹಣ ಶೇಖರವಾಗಿದ್ದುದರಿಂದ, ಪಾರ್ವತೀಬಾಯಿಯು ತನ್ನ ಯೋಚನೆ ಯನ್ನು ಬಿಟ್ಟುಬಿಡಬೇಕಾಯಿತು.

ರವೀಂದ್ರನಾಥರು ಮತ್ತು ಅವರ ಸೊಸೆಯ ಜತೆಯಲ್ಲಿಯೇ ಪಾರ್ವತೀಬಾಯಿಯು ಜುಲೈ ೨ನೆಯ ತಾರೀಖಿನ ದಿನ ಮಾರ್ಸೇಲ್ಸ್ ನಿಂದ ಬೊಂಬಾಯಿ ಕಡೆಗೆ ಪ್ರಯಾಣ ಮಾಡಿದಳು. ಈ ಜಹಜಿನಲ್ಲಿ ಇಪ್ಪತ್ತೈದು ಭಾರತೀಯ ವಿದ್ಯಾರ್ಥಿಗಳಿದ್ದರು. ಕವಿ ರವೀಂದ್ರರು ಈ ವಿದ್ಯಾರ್ಥಿಗಳೊಂದಿಗೆ ಕವಿತ್ವದ ಸಂಬಂಧವಾಗಿ ಚರ್ಚಿಸುತ್ತಿದ್ದರು. ಹಡಗಿನವರೆಲ್ಲರೂ ಪ್ರಶಾಂತವಾದ ಬೆಳದಿಂಗಳ ರಾತ್ರಿಗಳನೇಕವನ್ನು ಕವಿ ರವೀಂದ್ರರ ಅಮೃತವಾಣಿಯನ್ನು ಕೇಳುತ್ತ ಕಳೆಯುತ್ತಿದ್ದರು. ಹಡಗು ಜುಲೈ ೧೫ರಲ್ಲಿ ಬೊಂಬಾಯನ್ನು ತಲಪಿತು. ಪಾರ್ವತೀಬಾಯಿ ಬೊಂಬಾ ಯಲ್ಲಿ ಎರಡುಮೂರು ದಿನಗಳಿದ್ದು ಅನಂತರ ಹಿಂಗಣೆಯಲ್ಲಿನ ತನ್ನ ಮಮತೆಯ 'ವಿಧವಾಶ್ರಮ'ಕ್ಕೆ ಬಂದು ತನ್ನ ಕೆಲಸವನ್ನು ಕೈಗೊಂಡಳು.

# ೨೫. ನಮ್ಮ ಸಮಾಜ

ನಮ್ಮ ಹಿಂದೂ ಸಮಾಜದಲ್ಲಿನ ಕೆಲವು ಅವಿವೇಕಗಳನ್ನು ಸರಿಪಡಿಸಲು ಅನೇಕ ಮಾನ್ಯ ಮುಖಂಡರು ತಮ್ಮ ಅಭಿಪ್ರಾಯಗಳನ್ನು ಸಭೆಗಳಲ್ಲಿ ಹೊರಗೆಡಹುತ್ತಲಿರುವರು. ಪಾರ್ವತೀಬಾಯಿಯು ಅಂಥವರ ಗುಂಪಿಗೆ ಸೇರಿದವಳೆಂದು ಹೇಳಲಾಗುವುದಿಲ್ಲ. ಆದರೆ ವಿಧವಾಶ್ರಮದ ಕೆಲಸಕ್ಕಾಗಿ ತುಂಬ ದೇಶಾಟನೆ ಮಾಡಬೇಕಾದುದರಿಂದ ಆಕೆಗೆ ನಮ್ಮ ದೇಶದ ಎಲ್ಲ ಜನಾಂಗಗಳ ಸಾಮಾಜಿಕ ಜೀವನವನ್ನು ಚೆನ್ನಾಗಿ ವಿಮರ್ಶಿಸಿ ಅವುಗಳಲ್ಲಿನ ಕುಂದು ಕೊರತೆಗಳನ್ನು ತಿಳಿದುಕೊಳ್ಳುವ ಅವಕಾಶ ದೊರೆಯಿತು. ಅಮೆರಿಕ ಮತ್ತು ಯೂರೋಪ್ ದೇಶಗಳಲ್ಲಿ ಪ್ರವಾಸ ಮಾಡಿದುದರಿಂದ ಅಲ್ಲಿಯ ನಡುವಳಿಗಳೂ ಚೆನ್ನಾಗಿ ತಿಳಿದುವು. ಪೂರ್ವ ಪಶ್ಚಿಮ ದೇಶಗಳ ಸಂಸ್ಕೃತಿಗಳೆರಡರಿಂದ ಯಾವುದನ್ನು ನಾವು ಗ್ರಹಿಸಿ ಆಚರಣೆಯಲ್ಲಿಟ್ಟುಕೊಂಡರೆ ಸುಸಂಸ್ಕೃತವೆನಿಸಿದ ನಮ್ಮ ಜನಾಂಗಕ್ಕೆ ಒಳ್ಳೆಯದು ಎಂಬುದನ್ನು ಪಾರ್ವತೀಬಾಯಿಯು ತನ್ನ ಆತ್ಮಕಥೆಯಲ್ಲಿ ವಿವರಿಸಿದ್ದಾಳೆ. ನಮ್ಮ ಸಮಾಜದ ವಿಚಾರದಲ್ಲಿ ಪಾರ್ವತೀಬಾಯಿಯು ಪಡೆದಿರುವ ಹಲವು ಅಭಿಪ್ರಾಯಗಳನ್ನು ಮುಂದೆ ಕೊಡಲಾಗಿದೆ.

ನಮ್ಮ ಹೆಂಗುಸರಲ್ಲಿ ಸಾಮಾನ್ಯವಾಗಿ ವಿವಾಹಿತರಾಗಿರುವವರ ಸಂಖ್ಯೆಯೇ ಹೆಚ್ಚು. ಸಂಸಾರದ ವೆಚ್ಚಕ್ಕೆ ಬೇಕಾಗುವ ಹಣವನ್ನೆಲ್ಲ ಗಂಡಸರೇ ಒದಗಿಸಬೇಕಾಗಿರುವುದರಿಂದ ಗಂಡಸರು ಬಹುವಾಗಿ ಹೊರಗಡೆಯೇ ಇರಬೇಕಾಗಿದೆ. ಅಂದರೆ ಮನೆ ಮತ್ತು ಮಕ್ಕಳನ್ನು ನೋಡಿಕೊಳ್ಳುವ ಭಾರವೆಲ್ಲವೂ ಹೆಂಗುಸಿಗೇ ಸೇರಿದೆ. ಗಂಡಸರು ಸಂಪಾದಿಸಿ ತಂದುಹಾಕಿಬಿಟ್ಟರೆ ನಮ್ಮ ಜವಾಬ್ದಾರಿ ತೀರಿತು ಎಂದುಕೊಂಡಿರುವುದರಿಂದ ಅವರು ಮನೆಯ ವಿಷಯಗಳಲ್ಲಿಯಾಗಲಿ ಮಕ್ಕಳ ಮತ್ತು ಆಳುಕಾಳುಗಳ ವಿಷಯಗಳಲ್ಲಿಯಾಗಲಿ ಯಾವ ಬಗೆಯ ಆಸಕ್ತಿಯನ್ನೂ ವಹಿಸುತ್ತಿಲ್ಲ. ಅದರಿಂದ ಮನೆಯಲ್ಲಿರಬೇಕಾದ ಶಿಸ್ತು, ಮಕ್ಕಳ ಒಳ್ಳೆಯ ನಡತೆ, ಸಂಸಾರದಲ್ಲಿನ ವಿಚಕ್ಷಣತೆ ಮುಂತಾದುವೆಲ್ಲ ಸ್ತ್ರೀಯ ಪಾಲಿನದೇ ಆಗಿದೆ. ಆದರೆ ನಮ್ಮ ಮನೆಗಳಲ್ಲಿ ಮಕ್ಕಳ 'ಒಳ್ಳೆಯ ನಡತೆ' (Good

Manners)ಯ ಬಗ್ಗೆ ಪಾಶ್ಚಾತ್ಯರು ಕೊಡುವಷ್ಟು ನಿಗ ಕೊಡುವುದಿಲ್ಲ ವೆಂಬುದು ಶೋಚನೀಯವಾಗಿದೆ. ಕೆಲವು ಮನೆಗಳಲ್ಲಿ ಆಳುಗಳ ಪಾರು ಪತ್ಯವೇ ಹೆಚ್ಚಾಗಿರುತ್ತದೆ. ಎಷ್ಟೋ ದೊಡ್ಡಮನುಷ್ಯರೆನಿಸಿಕೊಂಡವರ ಮನೆಯ ಮಕ್ಕಳು ತಮ್ಮ ಹಿರಿಯರಿಗೆ ಒರಟಾಗಿ ಜವಾಬು ಕೊಡು ತ್ತಾರೆ. ಮನೆಗೆ ಬಂದವರ ಹತ್ತಿರ ಸರಿಯಾಗಿ ಮಾತನಾಡುವುದಕ್ಕೆ ಬಾರದು. ಮನೆಯಲ್ಲಿ ಯಾವಾಗಲೂ ರಗಳೆ ಮಾಡಿ ಎಲ್ಲರಿಗೂ ಬೇಸರ ವುಂಟುಮಾಡಿ ಕಾಲವನ್ನೆಲ್ಲ ಆಟದಲ್ಲಿಯೇ ಕಳೆಯುತ್ತಾರೆ. ಅಂದರೆ ಮಕ್ಕಳು ಯಾವಾಗಲೂ ಕೈಕಾಲು ಮುದುರಿಕೊಂಡು ಬೊಂಬೆಗಳಂತೆ ಕುಳಿತಿರಬೇಕೆಂದಲ್ಲ. ಆಟಪಾಠಗಳಿಗೆ ಕ್ಲುಪ್ತ ಕಾಲಗಳಿರಬೇಕು. ಅವ ನ್ನೆಲ್ಲ ಮನೆಯ ಯಜಮಾನಿಯು ಸಹನೆಯಿಂದ ನೋಡಿಕೊಳ್ಳಬೇಕು. ಶಿಸ್ತನ್ನೂ, ಗಾಂಭೀರ್ಯವನ್ನೂ ಮೊದಲಿಂದ ತಾಯಿಯು ಹೇಳಿಕೊಟ್ಟರೆ ಮಕ್ಕಳೂ ಆಳು ಕಾಳುಗಳೂ ಅದರಂತೆ ನಡೆದುಕೊಳ್ಳುವರು.

ಮನೆಯು ಒಂದು ಪಾಠಶಾಲೆ. ಅಲ್ಲಿನ ಅಧ್ಯಾಪಕರೆಂದರೆ ಯಜ ಮಾನ ಯಜಮಾನಿಯರೇ. ಮನೆಯ ಮಕ್ಕಳಿಗೂ ಆಳುಕಾಳುಗಳಿಗೂ ಸರಿಯಾದ ತಿಳುವಳಿಕೆಯನ್ನು ಕೊಡಬೇಕಾದುದೇ ಅವರ ಪರಮಧರ್ಮ. ಅವರು ತಮ್ಮ ಕರ್ತವ್ಯವನ್ನು ಪಾಲಿಸದಿದ್ದರೆ ಮನೆಯು ಒಂದು ರಣ ರಂಗದಂತೆಯೇ ಸರಿ. ಐವತ್ತು ವರ್ಷಗಳ ಹಿಂದೆ ನಮ್ಮ ಹಿರಿಯರು ಮಕ್ಕ ಳಿಗೆ ಹೇಳಿಕೊಡುತ್ತಿದ್ದ ಒಳ್ಳೆಯ ನಡತೆಗಳನ್ನು ವಿದ್ಯಾವಂತರೆನಿಸಿದ ಈಗಿನವರ ಮನೆಗಳಲ್ಲಿ ಕಾಣುವುದು ಕಷ್ಟವಾಗಿದೆ. ಈಗಿನ ಮನೆಗಳಲ್ಲಿ ಅವಿಧೇಯತೆಯೇ ಹೆಚ್ಚುತ್ತಿರುವುದು ಬಹಳ ಶೋಚನೀಯವಾಗಿದೆ.

ಇವೆಲ್ಲ ಸರಿಹೋಗಬೇಕಾದರೆ ನಮ್ಮ ಹೆಣ್ಣುಮಕ್ಕಳಿಗೆ ಸರಿಯಾದ ವಿದ್ಯಾಭ್ಯಾಸವಾಗಬೇಕು. ಇದುವರೆಗೂ ನಡೆದಿರುವ ವಿದ್ಯಾಭ್ಯಾಸಕ್ರಮ ದಿಂದ ಎಳ್ಳಷ್ಟೂ ಉಪಯೋಗವಾಗಿಲ್ಲ. ಮುಂದಿನ ಪೀಳಿಗೆಯ ತಾಯಿ ಯರಾಗತಕ್ಕ ಹೆಣ್ಣುಮಕ್ಕಳಿಗೆ ಗೃಹವಿಜ್ಞಾನ, ಆಹಾರವಿಜ್ಞಾನ, ಶಿಶು ಸಂರಕ್ಷಣೆ, ಗೃಹವೈದ್ಯ, ಪ್ರಥಮ ಚಿಕಿತ್ಸೆ, ಗೃಹಶುದ್ಧಿ, ಹೊಲಿಗೆ ಮುಂತಾದ ಕುಟುಂಬ ನಿರ್ವಾಹಕ್ಕೆ ಸಹಕಾರಿಯಾಗುವ ತಿಳುವಳಿಕೆ ಯನ್ನು ಕೊಡುವ ವಿದ್ಯೆಯು ಆವಶ್ಯಕ,

ನಮ್ಮ ಪೂರ್ವಿಕರು ಮಾಡಿಟ್ಟಿದ್ದ ಕುಟುಂಬ ನಿಯಮಗಳೆಲ್ಲ ಈಗ ಸಡಿಲವಾಗಿ ಹೋಗಿವೆ. ಹಿಂದೆ ನಮ್ಮ ಮನೆಗಳು ದೊಡ್ಡವಾಗಿ ಜನ ಭರಿತವಾಗಿರುತ್ತಿದ್ದುವು. ಪರಸ್ಪರ ಸಹಾಯತತ್ವದ ಆಧಾರದ ಮೇಲೆಯೇ ನಮ್ಮ ಪೂರ್ವಿಕರು ಮನೆಗಳನ್ನು ನಿರ್ಮಿಸಿದ್ದರು. ಈಗಿನ ಮನೆಗಳಲ್ಲಿ "ರಾಜ, ರಾಣಿ ರಾಜಕುಮಾರ ಇಷ್ಟೇ ಸಾಕು" ಎನ್ನುವುದು ರೂಢಿಯಾಗುತ್ತಿದೆ.

ಪಾಶ್ಚಾತ್ಯರಲ್ಲಿ ಕುಟುಂಬ ಸೌಖ್ಯವು ಕಡಿಮೆಯಾಗಿ ಹೊಟೇಲುಗಳು ಬೆಳೆಯುತ್ತಿವೆ. ವಿವಾಹಿತ ಹೆಂಗುಸರಿಗಿಂತ ಅವಿವಾಹಿತರ ಸಂಖ್ಯೆ ಬೆಳೆಯುತ್ತಿದೆ. "ಹೀಗಿರುವಲ್ಲಿ ನಾವು ಅವರಿಂದ ಕಲಿಯಬೇಕಾದುದೇನು?" ಎಂಬುದೇ ಒಂದು ಸಮಸ್ಯೆಯಾಗಿದೆ. ನಮ್ಮವರು ಐರೋಪ್ಯರಿಂದ ಶುಚಿತ್ವ, ಕಾರ್ಯತತ್ಪರತೆ, ಮಕ್ಕಳ ಪೋಷಣೆ, ವಂಶಗೌರವವನ್ನುಳಿಸಿಕೊಳ್ಳಲು ಅವರು ಪಡುವ ಶ್ರಮ ಇತ್ಯಾದಿ ಸದ್ಗುಣಗಳನ್ನು ಗ್ರಹಿಸಬೇಕು. ಅದನ್ನು ಬಿಟ್ಟು, ನಮ್ಮ ದಾರಿದ್ರ್ಯ, ಹವಾಗುಣ, ಆರೋಗ್ಯಗಳಿಗೆ ಸ್ವಲ್ಪವೂ ಹೊಂದದ ಬಾಹ್ಯಾಡಂಬರವನ್ನು ಮಾತ್ರ ಅನುಸರಿಸುತ್ತಿದ್ದಾರೆ.

ಈಚೆಗೆ ನಮ್ಮ ಮಕ್ಕಳಿಗೆ ಹಿರಿಯರು ಮತಸಂಬಂಧವಾದ ವಿಷಯಗಳ ತಿಳುವಳಿಕೆಯನ್ನು ಕೊಡುವುದೇ ಅಪರೂಪವಾಗುತ್ತಲಿದೆ. ಇದರಿಂದ ಮಕ್ಕಳ ನೈತಿಕ ಮತ್ತು ಮಾನಸಿಕ ಬೆಳವಣಿಗೆಯು ತೃಪ್ತಿಕರವಾಗಿ ಆಗುತ್ತಿಲ್ಲ. ಎಲ್ಲೋ ಕೆಲವು ಮಾದರಿ ಕುಟುಂಬಗಳ ವಿನಾ ಮುಕ್ಕಾಲುಪಾಲು ಮನೆಗಳೆಲ್ಲ ಅರ್ಧ ಹಿಂದು ಅರ್ಧ ಐರೋಪ್ಯ ಮನೆಗಳಾಗಿ ಹೋಗಿವೆ. ಹೀಗೆಯೇ ಇದ್ದರೆ ಮುಂದೆ ನಮ್ಮ ಕುಟುಂಬ ಪದ್ಧತಿಯ ಗತಿಯೇನು?

ಐರೋಪ್ಯ ಸ್ತ್ರೀಯರು ಕೇವಲ ಗೃಹಕೃತ್ಯವನ್ನೇ ಅಲ್ಲದೆ ಅನೇಕ ಸಾಮಾಜಿಕ ಕಾರ್ಯಗಳನ್ನು ಸಹ ಕೈಗೊಂಡು ಆಸಕ್ತಿಯಿಂದ ಕೆಲಸ ಮಾಡುತ್ತಾರೆ. ವೃತ್ತ ಪತ್ರಿಕೆಗಳಿಗೆ ಬರೆಯುವುದು, ಸಭೆಗಳಿಗೆ ಹೋಗಿ ಉಪನ್ಯಾಸ ಕೊಡುವುದು, ಶಿಶು ಸಂರಕ್ಷಣೆ, ನಗರ ನೈರ್ಮಲ್ಯದ ಬಗ್ಗೆ ಅತ್ಯಾವಶ್ಯಕವಾಗಿ ಜರುಗಬೇಕಾದ ಸುಧಾರಣೆಗಳು, ಕೂಲಿ ಹೆಂಗುಸರ

ಕಷ್ಟಗಳನ್ನು ಪರಿಹರಿಸುವುದೇ ಮೊದಲಾದವು ಅವರ ಕಾರ್ಯಕಲಾಪಗಳಲ್ಲಿ ಕೆಲವು.

ನಮ್ಮ ದೇಶದಲ್ಲಿ ಇಂಥ ಕೆಲಸಗಳು ಸಾಮಾನ್ಯವಾಗಿ ವಿಧವೆಯರು ಮತ್ತು ಓದಿ ಮದುವೆಯಾಗದೆ ಇರುವ ಹೆಂಗುಸರ ಪಾಲಿಗೆ ಬಿದ್ದಿವೆ. ಗೃಹಿಣಿಯರು ಈ ಕೆಲಸಗಳಲ್ಲಿ ಭಾಗವಹಿಸಿದ್ದೇ ಆದರೆ ಮನೆಯಲ್ಲಿನ ಗಂಡಸರಿಗೂ ಅವುಗಳಲ್ಲಿ ಆಸಕ್ತಿ ಹುಟ್ಟಿ ಅವರನ್ನು ಆ ಕೆಲಸಗಳಲ್ಲಿ ಪ್ರೇರೇಪಿಸಿದಂತಾಗುತ್ತದೆ. ಇದರ ಪರಿಣಾಮವು ತೃಪ್ತಿಕರವಾಗುವುದರಲ್ಲಿ ಸಂಶಯವಿಲ್ಲ. ನಮ್ಮ ದೇಶದ ಗೃಹಿಣಿಯರು ತಮ್ಮ ಗಂಡಂದಿರೊಂದಿಗೆ ಯಾವಾಗಲೂ ಯಾವುದಾದರೂ ಒಂದು ಗೋಳನ್ನು ಹೇಳಿಕೊಳ್ಳುತ್ತಿರುವ ವಾಡಿಕೆ ಇದೆ. ಇದನ್ನು ತಪ್ಪಿಸಿಕೊಳ್ಳಲು ವಿದ್ಯಾವಂತರಾದ ಗಂಡಂದಿರು ಮತ್ತು ಗಂಡುಮಕ್ಕಳು ತಮ್ಮ ವಿರಾಮಕಾಲದಲ್ಲಿ ಮನೆಗಳಿಗೆ ಹೋಗುವುದಕ್ಕೆ ಇಷ್ಟಪಡದೆ ಮನೆಗೆ ಬರುವ ಬದಲು ಕ್ಲಬ್ಬುಗಳಿಗೆ ಹೋಗುತ್ತಾರೆ. ಮನೆ ಹತ್ತಿರವಾಗಿದ್ದರೂ ಸಹ ಮಧ್ಯಾಹ್ನದ ಕಾಫಿ ತಿಂಡಿಗೆ ಹೊಟೇಲುಗಳಿಗೆ ಹೋಗುತ್ತಾರೆ. ಅನೇಕ ಗಂಡಸರು ಮನೆ ಎಂದರೆ ಕೇವಲ ಊಟ ಮಾಡುವ ಸ್ಥಳ ಎಂಬ ಅಭಿಪ್ರಾಯವುಳ್ಳವರಾಗಿ ಹೋಗಿದ್ದಾರೆ. ಪಾಶ್ಚಾತ್ಯರಂತೆ ನಮ್ಮ ಗಂಡಸರು ಮನೆಯ ಕಡೆಗೆ ದೃಷ್ಟಿಯುಳ್ಳವರಾಗಬೇಕಾದರೆ ನಮ್ಮ ಗೃಹಿಣಿಯರು ಅದಕ್ಕಾಗಿ ಸ್ವಲ್ಪ ಪ್ರಯತ್ನ ಮಾಡಲೇಬೇಕು.

ನಮ್ಮ ದೇಶದಲ್ಲಿನ ಗಂಡಸರೂ ಮಕ್ಕಳೂ ಮನೆಯೇ ಸಕಲ ಸೌಕರ್ಯಗಳಿಗೂ ಸಂತೋಷಕ್ಕೂ ಕೇಂದ್ರಸ್ಥಾನವೆಂದು ಚೆನ್ನಾಗಿ ತಿಳಿದುಕೊಳ್ಳಬೇಕು. ಇದಕ್ಕಾಗಿ ಹೆಂಗುಸರು ತಮ್ಮ ಕೈಲಾದಮಟ್ಟಿಗೂ ಹೆಣಗಬೇಕು. ಪ್ರತಿ ಗೃಹಿಣಿಯೂ ಮನೆಯನ್ನು ಶುಚಿಯಾಗಿಯೂ, ಅಂದವಾಗಿಯೂ, ಆರೋಗ್ಯಕರವಾಗಿಯೂ ಇಟ್ಟಿರಬೇಕು. ಈ ವಿಷಯಗಳ ಬಗ್ಗೆ ಹೆಣ್ಣು ಮಕ್ಕಳ ಶಾಲೆಗಳಲ್ಲಿ ಸರಿಯಾದ ಶಿಕ್ಷಣವನ್ನು ಕೊಡುವುದು ಅತ್ಯಾವಶ್ಯಕ.

ಪಾಶ್ಚಾತ್ಯ ದಂಪತಿಗಳಿಂದ ನಮ್ಮವರು ಕಲಿಯಬೇಕಾದುದು ಬಹಳವಿದೆ. ನಮ್ಮಲ್ಲಿ ಸ್ವಲ್ಪ ವಯಸ್ಸಾದವರು ತಮ್ಮ ಉಡುಪುಗಳ

ವಿಚಾರದಲ್ಲಿ ಬಹಳ ಉದಾಸೀನರಾಗಿರುತ್ತಾರೆ. ಕೆಲವು ಗೃಹಿಣಿಯರು ಯಾವಾಗಲೂ ತಲೆ ಕೆದರಿಕೊಂಡು ಮಾಸಿದ ಅಥವಾ ಬಣ್ಣಹೋದ ಸೀರೆಗಳನ್ನುಟ್ಟಿರುತ್ತಾರೆ. ಯಾರಾದರೂ, "ನಿಮ್ಮ ವೇಷವನ್ನು ಸ್ವಲ್ಪ ಸರಿಪಡಿಸಿಕೊಳ್ಳಬಾರದೇ?" ಎಂದು ಕೇಳಿದರೆ, "ನನ್ನನ್ನು ಇನ್ನು ಯಾರು ಮೆಚ್ಚಬೇಕು? ಹೇಗೋ ಮದುವೆಯಾಗಿಹೋಯಿತು. ಇನ್ನು ಹೇಗಿದ್ದರೆ ಏನು?" ಎನ್ನುತ್ತಾರೆ. ಅದು ಸರಿಯಲ್ಲ. ಗೃಹಿಣಿಯರು ತಮ್ಮ ಪತಿಯ ಮನರಂಜನೆಗಾಗಿ ತಾವು ಅಲಂಕಾರ ಮಾಡಿಕೊಳ್ಳಬೇಕು. ಗಂಡಸರೂ ತಮ್ಮ ಕೈಲಾದಮಟ್ಟಿಗೂ ತಮ್ಮ ಮಡದಿಯರನ್ನು ಸಂತೋಷ ಪಡಿಸಲು ಪ್ರಯತ್ನಿಸಬೇಕು. ಪಾಶ್ಚಾತ್ಯರು ಅದಕ್ಕೆ ಬಹಳ ಪ್ರಾಮುಖ್ಯ ವನ್ನು ಕೊಡುತ್ತಾರೆ. ಮದುವೆಯಾದ ಹತ್ತು ಹದಿನೈದು ವರ್ಷಗಳಾದ ಮೇಲೂ ಅವರು ಪರಸ್ಪರ ತಮ್ಮ ಪ್ರೀತಿಯನ್ನು ವೃದ್ಧಿಪಡಿಸಿಕೊಳ್ಳುವ ಸಲುವಾಗಿ ಸತತ ಪ್ರಯತ್ನಮಾಡುತ್ತಾರೆ. ನಮ್ಮವರೂ ಅವರ ಈ ಪದ್ಧತಿಯನ್ನು ಅನುಸರಿಸಿದ್ದೇ ಆದರೆ ನಮ್ಮ ಮನೆಗಳಲ್ಲಿ ಯಾವಾಗಲೂ ಸುಖಶಾಂತಿಗಳು ನೆಲೆಸಿರುವಂತಾಗುವುದರಲ್ಲಿ ಸಂದೇಹವಿಲ್ಲ.

ಪಾಶ್ಚಾತ್ಯ ಮಹಿಳೆಯರು ಗೃಹನೈರ್ಮಲ್ಯದ ಕಡೆಗೆ ಬಹಳ ನಿಗಾ ಕೊಡುತ್ತಾರೆ. ಮನೆಯ ಎಲ್ಲ ಏರ್ಪಾಡುಗಳನ್ನೂ ಸುಖಶಾಂತಿಗಳಿಗಾ ಗಿಯೇ ಮಾಡಿರುತ್ತಾರೆ. ನಮ್ಮ ಮನೆಗಳಲ್ಲಿ ಹಾಗಲ್ಲ. ಬಹಳ ಹಣ ವಂತರ ಮನೆಗಳಲ್ಲಿ ಸಹ ಮೂಲೆಗಳಲ್ಲಿ ಜೇಡರ ಗೂಡುಗಳನ್ನೂ ಎಷ್ಟೋ ದಿವಸಗಳ ಕಸ, ಧೂಳು ಮುಂತಾದುವನ್ನೂ ಕಾಣಬಹುದು. ಕಿಟಕಿಗಳ ಅಂಚುಗಳಲ್ಲಿಯೂ ಬಾಗಿಲುಗಳ ಮೇಲೂ ಎಷ್ಟೋ ವರ್ಷದ ಧೂಳು ನೆಲೆ ಸಿರುತ್ತದೆ. ಮರದ ಸಾಮಾನುಗಳನ್ನು ಒರೆಸುವ ಪದ್ಧತಿಯನ್ನೇ ನಮ್ಮ ವರು ಬಿಟ್ಟುಬಿಟ್ಟಿದ್ದಾರೆ.

ಅಡಿಗೆಯ ಮನೆಯಾದರೋ ಇನ್ನೂ ಕೊಳಕಾಗಿರುತ್ತದೆ. ಇಲಿ ಗಳೂ ಜಿರಳೆಗಳೂ ಅಡಿಗೆಯ ಪದಾರ್ಥಗಳ ಮೇಲೆಲ್ಲಾ ಓಡಾಡುತ್ತಿರು ತ್ತವೆ. ಇವುಗಳಿಂದ ದೇಹಕ್ಕೆ ಎಷ್ಟು ಅನಾರೋಗ್ಯವೆಂಬುದು ಕೂಡ ಕೆಲವರಿಗೆ ತಿಳಿಯದು.

ಕಕ್ಕಸುಗಳನ್ನು ಶುಚಿಮಾಡುವ ವಿಷಯದಲ್ಲಿ ಪಾಶ್ಚಾತ್ಯರಿಗೂ ನಮಗೂ ಬಹಳ ಅಂತರವಿದೆ. ಅವರು ಕಕ್ಕಸನ್ನು ಸರ್ವಪ್ರಯತ್ನ ಗಳಿಂದಲೂ ಬಹಳ ಶುಭ್ರವಾಗಿಟ್ಟಿರುತ್ತಾರೆ. ನಮ್ಮ ಮನೆಗಳಲ್ಲಿ ಕಕ್ಕಸೆಂದರೆ ಅದು ಒಂದು ಸಣ್ಣ ನರಕವೆಂದೇ ಹೇಳಬಹುದು. ತಿಂಗಳಿಗೆ ಒಂದೆರಡು ಸಲವಾದರೂ ಅದನ್ನು ತೊಳೆಯಿಸುವ ಪ್ರಯತ್ನವನ್ನು ಕೂಡ ಹಲವರು ಮಾಡುವುದಿಲ್ಲ.

ಪಾರ್ವತೀಬಾಯಿಯು ಅಮೆರಿಕದಿಂದ ಹಿಂದಿರುಗಿದ ಮೇಲೆ ಆಶ್ರಮದ ಕಕ್ಕಸುಗಳ ನೈರ್ಮಲ್ಯದ ಕಡೆ ವಿಶೇಷ ಗಮನವನ್ನು ಕೊಟ್ಟು, ಎಷ್ಟೋ ವೇಳೆ ತಾನೇ ತೊಳೆಯುತ್ತಿದ್ದಳು. ಇದರಿಂದ ಆಶ್ರಮವಾಸಿ ಗಳೆಲ್ಲರೂ ಆಕೆಯ ಉದಾಹರಣೆಯನ್ನೇ ಅನುಸರಿಸಿ ಕಕ್ಕಸನ್ನು ಚೊಕ್ಕಟ ವಾಗಿಡುತ್ತಿದ್ದರಂತೆ. "ನೀವೇಕೆ ಕಕ್ಕಸುಗಳ ವಿಷಯದಲ್ಲಿ ಇಷ್ಟು ಕಷ್ಟ ಪಡುತ್ತೀರಿ?" ಎಂದು ಕೇಳಿದರೆ ಆಕೆಯು, "ತಮ್ಮ ಕಕ್ಕಸುಗಳನ್ನು ಶುಭ್ರ ವಾಗಿಟ್ಟುಕೊಳ್ಳಲಾರದವರು ಮನೆಯನ್ನು ಹೇಗೆ ಚೊಕ್ಕಟವಾಗಿಟ್ಟು ಕೊಳ್ಳಬಲ್ಲರು? ಕೊಳಕನ್ನು ತೆಗೆಯುವುದಕ್ಕಾಗಿ ಕೆಲಸಮಾಡುವುದರಲ್ಲಿ ಅಪಮಾನವಿಲ್ಲ. ಆ ಕೊಳೆಯಲ್ಲಿಯೇ ವಾಸಮಾಡಲು ಒಗ್ಗಿರುವುದೇ ನಿಜವಾಗಿಯೂ ಅಪಮಾನಕರವಾದುದು" ಎನ್ನುತ್ತಾಳೆ. ಸಾಧ್ಯವಾದ ಮಟ್ಟಿಗೂ ಆರೋಗ್ಯಕರವಾದ ಪದ್ಧತಿಗಳನ್ನು ಎಲ್ಲರೂ ಅನುಸರಿಸಬೇಕು.

## ೨೬. ವಿವಾಹ ಪದ್ಧತಿಗಳು

ನಮ್ಮ ಹಿಂದೂ ಸಮಾಜದಲ್ಲಿ ಮದುವೆಗೆ ತುಂಬ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಸಮಾಜದ ಬಿಗಿ ಮತ್ತು ನಿಬಂಧನೆಗಳಿಗೆ ವಿವಾಹವು ಮುಖ್ಯವೆಂಬುದು ನಮ್ಮವರ ಮತ. ನಮ್ಮಲ್ಲಿ ಅವಿವಾಹಿತರಿಗಿಂತ ವಿವಾಹಿತರ ಸಂಖ್ಯೆ ಹೆಚ್ಚಾಗಿರುವುದೇ ಈ ತತ್ವಕ್ಕೆ ನಿದರ್ಶನವಾಗಿದೆ. ಯಾವ ಪದ್ಧತಿಯೇ ಆಗಲಿ ದೋಷರಹಿತವಾಗಿರಲಾರದು. ನಮ್ಮಲ್ಲಿ ಪೂರ್ವದಿಂದಲೂ ರೂಢಿಯಲ್ಲಿದ್ದ ಬಾಲ್ಯವಿವಾಹ ಪದ್ಧತಿಯು ಈಚೆಗೆ ಕಡಿಮೆಯಾಗಿ ಪ್ರೌಢವಿವಾಹವು ವಾಡಿಕೆಗೆ ಬರುತ್ತಿದೆ. ಈ ಪ್ರೌಢವಿವಾಹ ವಿಷಯದಲ್ಲಿಯೂ ವಯಸ್ಸನ್ನು ಒಂದು ಕ್ಲುಪ್ತಕಾಲಕ್ಕೆ ಮೀರದಂತೆ ನಿರ್ಧರಿಸಬೇಕಾದುದು ಅತಿಮುಖ್ಯ. ಹೆಣ್ಣುಮಕ್ಕಳಿಗೆ ೧೬ ರಿಂದ ೨೦ ರೊಳಗಾಗಿಯೂ ಗಂಡುಮಕ್ಕಳಿಗೆ ೨೫ ರಿಂದ ೩೦ ರೊಳಗಾಗಿಯೂ ಮದುವೆ ಮಾಡಬೇಕು. ಹೀಗೆ ಒಂದು ವಯಸ್ಸನ್ನು ಗೊತ್ತುಮಾಡದೆ ಹೋದರೆ ಮುದುಕರು ಹುಡುಗಿಯರನ್ನು ಮದುವೆ ಮಾಡಿಕೊಳ್ಳಬಹುದಾಗುತ್ತದೆ. ಈ ಅವಧಿಯೊಳಗಾಗಿ ಹೆತ್ತವರು ತಮ್ಮ ಮಕ್ಕಳಿಗೆ ಸರಿಯಾದ ಸಂಬಂಧವನ್ನು ಹುಡುಕಬೇಕು. ಮದುವೆ ಮಾಡಬೇಕೆಂಬ ಉದ್ದೇಶವಿದ್ದಮೇಲೆ ಆ ವಿಷಯವನ್ನು ತುಂಬ ನಿಧಾನ ಮಾಡಬಾರದು. ಬಹುಕಾಲದವರೆಗೂ ಮದುವೆಯಾಗದಿದ್ದರೆ ಅನೇಕ ಅನರ್ಥಗಳಿಗೀಡಾಗಬಹುದು. ಕುಟುಂಬದ ಸೌಖ್ಯಕ್ಕಾಗಿ ಒಂದು ಕ್ಲುಪ್ತಕಾಲದೊಳಗಾಗಿ ಮದುವೆಯಾಗುವುದು ಒಳ್ಳೆಯದು.

ನಮ್ಮಲ್ಲಿ ಯುವಕರು ಕೇವಲ ಸ್ವೇಚ್ಛಾಚಾರಕ್ಕೆ ಮನಸ್ಸನ್ನು ಬಿಡದೆ ಹೆತ್ತವರಲ್ಲಿ ನಂಬಿಕೆಯನ್ನಿಟ್ಟು ಅವರ ಹಿತೋಕ್ತಿಗಳಂತೆ ನಡೆದುಕೊಳ್ಳಲು ಪ್ರಯತ್ನಿಸಬೇಕು. ಹಿರಿಯರು ಆ ವಿಷಯಗಳಲ್ಲಿ ತಮ್ಮ ಅನುಭವಗಳನ್ನು ಮಕ್ಕಳಿಗೆ ಆಗಾಗ ಹೇಳುತ್ತಿರಬೇಕು. ಐಶ್ವರ್ಯ, ರೂಪ, ದೊಡ್ಡಸ್ತಿಕೆಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುವುದಾದರೆ ಅನೇಕರು ಅವಿವಾಹಿತರಾಗಿಯೇ ಇರಬೇಕಾಗುತ್ತದೆ.

ಯುವಕರು ತಮ್ಮ ಮದುವೆಯ ವೆಚ್ಚಕ್ಕೆ ಬೇಕಾಗುವ ಹಣವನ್ನು ಸಂಪಾದಿಸುವವರೆಗೂ ಮದುವೆಯಾಗುವುದಿಲ್ಲವೆಂದು ಹಠ ಹಿಡಿಯ ಬಾರದು. ಹುಡುಗಿಯರು ಯಾವಜ್ಜೀವವೂ ಮದುವೆ ಮಾಡಿಕೊಳ್ಳು ವುದೇ ಇಲ್ಲ ಎಂಬ ಹಠವನ್ನೂ ಮಾಡಬಾರದು. ಎಲ್ಲ ಹುಡುಗಿಯರಿಗೂ ಐ. ಸಿ. ಎಸ್. ಪ್ಯಾಸು ಮಾಡಿದವರೇ ಸಿಕ್ಕಲಾರರು. ಹೆತ್ತವರು ಸರಿ ಯಾದ ವರನನ್ನು ಹುಡುಕಿದಾಗ ಹುಡುಗಿಯರು ತಾವು ಇಂಥ ಪರೀಕ್ಷೆ ಯಾಗುವವರೆಗೂ ಮದುವೆಯಾಗಲಾರೆನೆಂದು ಅವರ ಪ್ರಯತ್ನಕ್ಕೆ ಅಡ್ಡಿ ಮಾಡಬಾರದು. ಅಥವಾ ಮಕ್ಕಳೊಂದಿಗರಾದ ವಿಧುರರನ್ನು ಮದುವೆ ಯಾಗುವ ಬದಲು ಯಾವಜ್ಜೀವವೂ ಮದುವೆಯಿಲ್ಲದೆಯೇ ಇರಬಹು ದೆಂಬ ಹಠವನ್ನೂ ಹಿಡಿಯಬಾರದು. ಓದಿ ಉದ್ಯೋಗಮಾಡಬೇಕೆಂಬ ಆಕಾಂಕ್ಷೆಯಿಂದ ಮದುವೆಯನ್ನು ನಿಲ್ಲಿಸಬಾರದು. ತಮ್ಮ ಮಕ್ಕಳು ಹಾಗೆ ಹೇಳುತ್ತಾರೆಂದು ತಂದೆತಾಯಿಯರು ಅವರನ್ನು ಹೊಗಳಬಾರದು. ಓದಿನಿಂದ ಗೃಹಕೃತ್ಯಗಳನ್ನು ಅಚ್ಚುಮೆಚ್ಚಾಗಿ ನಿರ್ವಹಿಸುವ ಸಾಮರ್ಥ್ಯ ವುಂಟಾಗಬೇಕು. ಓದಿಗಾಗಿ ಗೃಹದ ಗೊಡವೆಯೇ ಬೇಡವೆಂಬುದು ಅವಿವೇಕ. ಅದರ ಪರಿಣಾಮವು ನೆಟ್ಟಗಾಗಲಾರದು.

ನೂರಕ್ಕೆ ಒಂದೆರಡು ಮದುವೆಗಳಲ್ಲಿ ದುಂದುವೆಚ್ಚಗಳಾಗಬ ಹುದು. ದುಂದುವೆಚ್ಚದಿಂದಮದುವೆಯ ಸೌಖ್ಯವು ಹೆಚ್ಚಲಾರದು. ಯುವ ಕರು ಇದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ವಿವಾಹಿತರಿಗಿಂತಲೂ ಅವಿವಾಹಿತರು ಹೊಟೇಲು ಮುಂತಾದುವುಗಳಿಗೆ ಹೆಚ್ಚು ತೆತ್ತು ಎಷ್ಟೋ ಕಷ್ಟನಿಷ್ಠುರಗಳಿಗೀಡಾಗಬೇಕಾಗುತ್ತದೆ. ಪಾಶ್ಚಾತ್ಯರಲ್ಲಿರುವಂತೆ ಒಪ್ಪಂ ದದ (Contracts) ಮೇಲಿನ ಹಂಗಾಮಿ ಮದುವೆಗಳನ್ನು ನಮ್ಮವರು ಅನುಸರಿಸುವುದರಿಂದ ಬಹಳ ಅನರ್ಥವಾದೀತು. ಕರ್ತವ್ಯರಕ್ಷಣೆಯ ಮತ್ತು ಸ್ವಾರ್ಥತ್ಯಾಗದ ತಳಹದಿಯ ಮೇಲೆ ನಿರ್ಮಿಸಲ್ಪಟ್ಟ ವಿವಾಹ ಪದ್ಧತಿಗಳಿಂದ ನಮ್ಮ ದೇಶದ ಮತ್ತು ಜನಾಂಗದ ಏಳಿಗೆಗೆ ಸಹಾಯ ವಾಗುವುದರಲ್ಲಿ ಸಂದೇಹವಿಲ್ಲ. ಜಪಾನೀಯರಲ್ಲಿರುವಂತೆ ಹಳೆಯ ಬಾಲ್ಯ ವಿವಾಹ ಪದ್ಧತಿಗೂ ಪಾಶ್ಚಾತ್ಯರ ಪ್ರೌಢವಿವಾಹ ಪದ್ಧತಿಗೂ ಮಧ್ಯವರ್ತಿಯಾದ ವಿವಾಹ ಪದ್ಧತಿಯನ್ನು ನಾವು ಅನುಸರಿಸಬಹುದು.

## ೨೭. ಸ್ತ್ರೀಯರ ಸಂಸ್ಥೆಗಳು

ನಮ್ಮ ದೇಶದಲ್ಲಿ ಕೈಗಾರಿಕೆಯ ಸಂಸ್ಥೆಗಳೂ ರಾಜಕೀಯ ಸಂಸ್ಥೆಗಳೂ ಅನೇಕವಾಗಿವೆ. ಜನಸಾಮಾನ್ಯಕ್ಕೆ ಈ ಸಂಸ್ಥೆಗಳ ಮೇಲಿರುವಷ್ಟು ಆದರಣೆಯು ಹೆಂಗುಸರ ವಿದ್ಯಾ ಸಂಸ್ಥೆಗಳ ವಿಷಯದಲ್ಲಿ ಇಲ್ಲದಿರುವುದು ತುಂಬಾ ಶೋಚನೀಯವಾಗಿದೆ. ವಿಧವಾಶ್ರಮಗಳ ವಿದ್ಯಾರ್ಥಿನಿಯರೋ ಅಥವಾ ಉಪಾಧ್ಯಾಯಿನಿಯರೋ ಮದುವೆಯಾದರೆಂದರೆ ಅವರ ಮೇಲಿನ ಆಕ್ಷೇಪಣೆಗಳಿಗೆ ಕೊನೆಮೊದಲೇ ಇಲ್ಲ.

ಮಹಾರಾಷ್ಟ್ರದಲ್ಲಿ ಮಹಿಳಾ ವಿದ್ಯಾಸಂಸ್ಥೆಗಳೆಲ್ಲವೂ ಸಾರ್ವಜನಿಕರ ಸಹಾಯದಿಂದಲೇ ನಡೆಯುತ್ತಿವೆ. ಪ್ರಜೆಗಳಿಂದ ಆರಿಸಿದ ಸದಸ್ಯರೇ ಅವುಗಳ ಚಾಲಕರಾಗಿದ್ದಾರೆ. ಇಂಥ ಸಂಸ್ಥೆಗಳ ಸಮಿತಿಗಳಿಗೆ ಜನರು ಹೆಚ್ಚುಹೆಚ್ಚಾಗಿ ಸೇರಿ ಅದರ ಕಾರ್ಯಕ್ರಮಗಳನ್ನು ತೃಪ್ತಿಕರವಾಗಿ ಜರುಗಿಸಲು ಸರ್ವಪ್ರಯತ್ನವನ್ನೂ ಮಾಡಬೇಕು. ಜನರು ಈ ವಿಷಯದಲ್ಲಿ ಇನ್ನೂ ಉದಾಸೀನರಾಗಿಯೇ ಇದ್ದಾರೆ. ಸಂಚಾಲಕ ಮಂಡಲಿಯಲ್ಲಿ ಜನರಿಗೆ ಒಳ್ಳೆಯ ಅಭಿಪ್ರಾಯಗಳು ಬಂದಲ್ಲಿ ಆ ಸಂಸ್ಥೆಗಳು ಹೆಚ್ಚು ಸೇವೆಯನ್ನು ಸಲ್ಲಿಸಬಲ್ಲವು.

ಮಹಿಳಾ ವಿದ್ಯಾಸಂಸ್ಥೆಗಳಿಂದ ತರಬೇತಾದ ಹುಡುಗಿಯರು ಸುಸಂಸ್ಕೃತರೂ, ದೇಶಭಕ್ತರೂ, ಗುಣಾಢ್ಯರೂ ಆಗಬೇಕೆಂದು ಜನರು ಅಪೇಕ್ಷಿಸುತ್ತಾರೆ. ಇವುಗಳನ್ನು ಆಯಾ ಸಂಸ್ಥೆಗಳ ಅಧ್ಯಾಪಕರು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡು ತಮ್ಮ ಶಿಷ್ಯರನ್ನು ಉಚಿತರೀತಿಯಲ್ಲಿ ತರಬೇತು ಮಾಡಬೇಕಾದುದು ಅವರ ಕರ್ತವ್ಯ. ನಮ್ಮ ಭಾರತೀಯರು ಗಂಡುಮಕ್ಕಳಿಗಿಂತಲೂ ಹೆಣ್ಣುಮಕ್ಕಳ ಒಳ್ಳೆಯ ನಡತೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುತ್ತಿದ್ದಾರೆ. ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿನಿಯರು ತಮ್ಮ ನಡತೆಯನ್ನು ಸರಳವಾಗಿಯೂ ಪರಿಶುದ್ಧವಾಗಿಯೂ ಇಟ್ಟುಕೊಳ್ಳುವುದಕ್ಕೆ ಸರ್ವದಾ ಪ್ರಯತ್ನಿಸಬೇಕು; ಆಕ್ಷೇಪಣೆಗಳಿಗೆ ಒಳಪಡದಂಥ ನಿರಾಡಂಬರವಾದ ಉಡುಪನ್ನು ಧರಿಸಬೇಕು. ಗಾಂಭೀರ್ಯ, ದಯೆ, ದಾಕ್ಷಿಣ್ಯಗಳನ್ನು ಅಭ್ಯಸಿಸಬೇಕು.

ಉಪಾಧ್ಯಾಯಿನಿಯರು ಮದುವೆ ಮಾಡಿಕೊಂಡಿರಲಿ, ಮಾಡಿಕೊಳ್ಳದಿರಲಿ, ತಮ್ಮ ಶಿಷ್ಯರಲ್ಲಿ ಸ್ವಲ್ಪವೂ ಪಕ್ಷಪಾತವಿಲ್ಲದೆ ಎಲ್ಲರನ್ನೂ ಸಮವಾಗಿ ಕಾಣಬೇಕು. ಇಲ್ಲದಿದ್ದರೆ ತರಗತಿಯಲ್ಲಿ ವೈಮನಸ್ಯವೂ, ಹೊರಗಡೆ ದುರಭಿಪ್ರಾಯವೂ ಬಂದೀತು.

ಮಹಿಳಾ ವಿದ್ಯಾಲಯಗಳಲ್ಲಿ ಉಪಾಧ್ಯಾಯರ ಮತ್ತು ಉಪಾಧ್ಯಾಯಿನಿಯರ ಸಂಖ್ಯೆಯ ಬಗ್ಗೆ ಆಗಾಗ್ಗೆ ಚರ್ಚೆಗಳಾಗುತ್ತಲೇ ಇರುತ್ತವೆ. ಈ ಸಂಸ್ಥೆಗಳಿಗೆ ಬರಿಯ ಉಪಾಧ್ಯಾಯಿನಿಯರನ್ನೇ ಏಕೆ ನೇಮಿಸಬಾರದು? ಎನ್ನಬಹುದು. ಸ್ತ್ರೀ ವಿದ್ಯಾಭ್ಯಾಸವು ಎಷ್ಟೋ ಮುಂದುವರಿದಿದ್ದಾಗ್ಯೂ ಇನ್ನೂ ಈ ಎಲ್ಲ ಸಂಸ್ಥೆಗಳಿಗೂ ಸಾಕಾಗುವಷ್ಟು ಮಂದಿ ಬಿ.ಎ., ಎಂ.ಎ., ಪದವೀಧರರಾದ ಸ್ತ್ರೀಯರು ಸಿಕ್ಕುವುದು ಕಷ್ಟವಾಗಿದೆ. ಹಾಗೆ ವ್ಯಾಸಂಗಮಾಡಿರುವ ಹಲಕೆಲವರು ಸರ್ಕಾರಿ ಸಂಸ್ಥೆಗಳಲ್ಲಿ ಹೆಚ್ಚು ಸಂಬಳ ದೊರೆಯುವುದೆಂಬ ಆಸೆಯಿಂದ ಸರ್ಕಾರಿ ಉದ್ಯೋಗಗಳಿಗಾಗಿ ಒದ್ದಾಡುತ್ತಿದ್ದಾರೆ. ಕಡಿಮೆ ಆದಾಯದ ಹುದ್ದೆಗಳ ಕಡೆಗೆ ಅವರು ಕೊಡಬೇಕಾದಷ್ಟು ದೃಷ್ಟಿಯನ್ನು ಕೊಡುತ್ತಿಲ್ಲ.

ಹಣವಂತರೂ ವಿದ್ಯಾವಂತರೂ ಆದ ಹೆಂಗುಸರು ಲಾಭವಿಲ್ಲದ ಮಹಿಳಾ ಸಂಸ್ಥೆಗಳ ಕಡೆಗೆ ತಮ್ಮ ದೃಷ್ಟಿಯನ್ನು ತಿರುಗಿಸಬೇಕು. ಅವರು ಹಾಗೆ ಮಾಡುತ್ತಿಲ್ಲ. ಈ ಕಾರಣಗಳಿಂದ ಗಂಡಸರನ್ನು ಪ್ರೊಫೆಸರುಗಳಾಗಿಯೂ ಅಧ್ಯಾಪಕರಾಗಿಯೂ ತೆಗೆದುಕೊಳ್ಳಬೇಕಾಗಿದೆ. ಹೀಗೆ ತೆಗೆದುಕೊಂಡವರು ೧೦–೧೫ ವರ್ಷಗಳಕಾಲ ಕೆಲಸ ಮಾಡಿದ್ದರೂ, ಸರಿಯಾದ ಒಬ್ಬ ಉಪಾಧ್ಯಾಯಿನಿಯು ಸಿಕ್ಕುತ್ತಲೇ ಅವರನ್ನು ಆ ಕೆಲಸದಿಂದ ತೆಗೆದುಹಾಕಬೇಕಾಗುತ್ತದೆ. ಇದರಿಂದ ಗಂಡಸರಿಗೂ ಇಂತಹ ಸಂಸ್ಥೆಗಳಲ್ಲಿ ಕೆಲಸ ಮಾಡುವುದು ಹೀನಾಯವೆಂಬ ಅಭಿಪ್ರಾಯವು ಬಂದುಹೋಗಿದೆ.

ಜನಸಾಮಾನ್ಯರಿಗೆ ಹೆಂಗುಸರು ಕೆಲಸಮಾಡುವುದು ಅಷ್ಟಾಗಿ ಇಷ್ಟವಿಲ್ಲ. ಅದರಿಂದ ಇಂಥ ಕಡೆಗಳಲ್ಲಿ ಕೆಲಸಮಾಡುವ ಗಂಡಸರು ತಮ್ಮ ನಡವಳಿಕೆಯ ಕಡೆ ತುಂಬ ಜಾಗರೂಕರಾಗಿರಬೇಕು. ಪ್ರೊ॥ ಕರ್ವೆಯವರೂ ಮತ್ತು ವಿಧವಾಶ್ರಮದಲ್ಲಿ ಕೆಲಸಮಾಡುವ ಅವರ ಅನು

ಯಾಯಿಗಳೂ ತಮ್ಮ ನಡತೆಯ ಬಗ್ಗೆ ತೋರಿಸಿಕೊಟ್ಟಿರುವ ಮೇಲ್ಪಂಙ್ತಿ ಯನ್ನು ಎಲ್ಲರೂ ಅನುಸರಿಸಿದ್ದೇ ಆದರೆ ಯಾವ ಆಕ್ಷೇಪಣೆಗಳಿಗೂ ಅವಕಾಶವಾಗಲಾರದೆಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು.

ಉಪಾಧ್ಯಾಯಿನಿಯರ ಜವಾಬ್ದಾರಿಯು ಉಪಾಧ್ಯಾಯರ ಜವಾಬ್ದಾರಿಗಿಂತಲೂ ಹೆಚ್ಚಿನದು. ಏಕೆಂದರೆ ಹುಡುಗಿಯರು ಉಪಾಧ್ಯಾಯರನ್ನು ಅನುಕರಿಸುವುದಕ್ಕಿಂತ ಉಪಾಧ್ಯಾಯಿನಿಯರನ್ನೇ ಅನುಕರಿಸುವುದು ಹೆಚ್ಚು. ಆದುದರಿಂದ ಉಪಾಧ್ಯಾಯಿನಿಯರು ಎಲ್ಲ ವಿಧದಲ್ಲಿಯೂ ಉತ್ತಮವಾದ ನಡವಳಿಕೆಗಳನ್ನು ಅಭ್ಯಸಿಸಿ ಕೀರ್ತಿಯನ್ನು ಸಂಪಾದಿಸಬೇಕು.

## ೨೮. ಭಾರತ ಮಹಿಳೋದ್ಧಾರ

ಅನೇಕ ವಿಷಯಗಳಲ್ಲಿ ಭಾರತೀಯ ಮಹಿಳೆಯರ ಸ್ಥಿತಿಯು ಬಹಳ ಶೋಚನೀಯವಾಗಿದೆ. ಅವರ ಉದ್ಧಾರಕ್ಕಾಗಿ ಸಮಾಜ ಸುಧಾರಕರು ತುಂಬ ಕೆಲಸಮಾಡುತ್ತಿದ್ದಾರೆ. ಯೂರೋಪು ಖಂಡದ ಸ್ತ್ರೀಯರು ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಒಂದೆರಡು ಶತಮಾನಗಳಿಂದ ಹೆಣಗಾಡಿದರು. ಅವರು ಸಾಮಾನ್ಯವಾದ ಕೆಲವು ವಿಷಯಗಳಲ್ಲಿ ಸ್ವಾತಂತ್ರ್ಯ ಹೊಂದಿದ್ದರೂ ದಾಸ್ಯದಿಂದ ಇನ್ನೂ ಸಂಪೂರ್ಣವಾಗಿ ವಿಮುಕ್ತರಾಗಿಲ್ಲ. ಸ್ವಾತಂತ್ರ್ಯವೆಂಬುದಕ್ಕೆ ಗಂಡಸರ ಹಂಗಿಗೆ ಒಳಗಾಗದೆ ಸ್ವತಂತ್ರವಾಗಿ ಜೀವಿಸುವುದು, ಎಂಬ ಅರ್ಥ ಮಾಡುವುದಾದರೆ ಆ ಬಗೆಯ ಸ್ವಾತಂತ್ರ್ಯವು ಅಸಂಬದ್ಧ, ಅಸಾಧ್ಯ, ಹಾನಿಕರ ಮತ್ತು ನೀತಿ ಬಾಹಿರವಾದುದು.

ನಮ್ಮ ದೇಶದ ಸ್ತ್ರೀಯರು ನ್ಯಾಯಬದ್ಧವಾದ ಕೆಲವು ಹಕ್ಕು ಬಾಧ್ಯತೆಗಳನ್ನು ಪಡೆಯಬೇಕಾಗಿದೆ. ಇದನ್ನು ಯಾರೂ ಪ್ರಶ್ನಿಸುವುದೇ ಇಲ್ಲ. ಸ್ತ್ರೀಯರ ಸ್ವಾತಂತ್ರ್ಯವೆಂದರೆ ಗಂಡಸರ ಸಮಕ್ಕೂ ಕೆಲಸಮಾಡುವುದಲ್ಲ. ಗಂಡಂದಿರ ಹಂಗಿನಿಂದ ತಪ್ಪಿಸಿಕೊಂಡು ಉದ್ಯೋಗಗಳ ದಾಸ್ಯಕ್ಕೆ ಬಲಿಯಾಗುವುದಲ್ಲ. ಈ ಬಗೆಯ ಸ್ವಾತಂತ್ರ್ಯದಿಂದ ಪಾಶ್ಚಾತ್ಯ ಸ್ತ್ರೀಯರು ಅನುಭವಿಸುತ್ತಿರುವ ತೊಂದರೆಗಳನ್ನು ನಮ್ಮ ಸೋದರಿಯರು ಮರೆಯಬಾರದು. ನಮ್ಮ ಸ್ತ್ರೀಯರು ಯಾವ ವಿಧವಾದ ಸ್ವಾತಂತ್ರ್ಯವನ್ನು ಹೊಂದಬೇಕೆಂಬ ಬಗ್ಗೆ ಚೆನ್ನಾಗಿ ಆಲೋಚನೆ ಮಾಡಬೇಕು. ಸಮಾಜಸುಧಾರಕರ ಚಳುವಳಿಗಳಿಂದಲೇ ಘೋರವಾದ ಸಹಗಮನ ಪದ್ಧತಿಯು ನಿಂತುದು. ವಿಧವಾವಿವಾಹ ಮತ್ತು ಪ್ರೌಢವಿವಾಹಗಳು ದೇಶದಲ್ಲೆಲ್ಲ ಹರಡಲು ಸರ್ಕಾರದಿಂದ ಶಾಸನಗಳಾದುದು. ಸ್ತ್ರೀಯರ ಹಕ್ಕುಬಾಧ್ಯತೆಗಳ ವಿಷಯದಲ್ಲಿ ನಮ್ಮವರು ಪಾಶ್ಚಾತ್ಯ ಸ್ತ್ರೀಯರನ್ನು ಅನುಕರಿಸಬಾರದು. ಆ ದೇಶಗಳಲ್ಲಿ ಪ್ರತಿಯೊಂದು ವಿಷಯದಲ್ಲಿಯೂ ಗಂಡಸರಿಗೂ ಹೆಂಗುಸರಿಗೂ ಬಲವಾದ ಪೈಪೋಟಿಯಿದೆ. ಗಂಡಸರ ಎಲ್ಲ ಕೆಲಸಗಳನ್ನೂ ಹೆಂಗುಸರು ತಾವೇ ಆಕ್ರಮಿಸಿಕೊಳ್ಳುತ್ತ ತಮ್ಮ

ಮನೆಯೆಂಬ ಪವಿತ್ರಕಾರ್ಯಕ್ಷೇತ್ರವನ್ನು ಮರೆತು ಮನೆಯಲ್ಲಿ ಹೊರಗಿನವರಂತೆ ವರ್ತಿಸುತ್ತಾರೆ. ನಮ್ಮ ದೇಶದಲ್ಲೂ ಹಾಗಾಗಬಾರದು. ನಮ್ಮ ಹಿಂದೂಸ್ತ್ರೀಯು ಆದರ್ಶ ಸೋದರಿಯೂ, ಆದರ್ಶ ಪತ್ನಿಯೂ, ಆದರ್ಶ ಮಾತೆಯೂ ಆಗಿರಬೇಕೆಂಬುದನ್ನು ಸರ್ವದಾ ಮನನಮಾಡಿಕೊಳ್ಳುತ್ತಿರಬೇಕು. ಸ್ತ್ರೀ ವಿದ್ಯಾಭ್ಯಾಸವು ಈ ಆದರ್ಶಕ್ಕೆ ತಕ್ಕುದಾಗಿರಬೇಕು.

ಪಾಶ್ಚಾತ್ಯ ದೇಶಗಳಲ್ಲೂ ಕೂಡ ಗಂಡಸರಿಗೂ ಹೆಂಗುಸರಿಗೂ ಅವರವರ ಮಾನಸಿಕ, ನೈತಿಕ ಮತ್ತು ಸಾಮಾಜಿಕ ಕರ್ತವ್ಯ ಪಾಲನೆಗಳಿಗನುಗುಣವಾದ ಪ್ರತ್ಯೇಕವಾದ ವಿದ್ಯಾಭ್ಯಾಸ ಪದ್ಧತಿಗಳಿರಬೇಕೆಂಬ ಭಾವನೆಯು ಈಚೆಗೆ ಪ್ರಬಲಿಸುತ್ತಿದೆ. ಇದುವರೆಗೂ ನಡೆದಿರುವ ವಿದ್ಯಾಭ್ಯಾಸಕ್ರಮಗಳಿಂದ ಜನರು ನಿರೀಕ್ಷಿಸಿದಷ್ಟು ಒಳ್ಳೆಯ ಪರಿಣಾಮವಾಗಿಲ್ಲವೆಂಬ ಆಕ್ಷೇಪಣೆಯು ಎಲ್ಲೆಲ್ಲಿಯೂ ಕೇಳಿಬರುತ್ತಿದೆ. ಆದಾಗ್ಯೂ ಗೃಹಕಾರ್ಯನಿರ್ವಹಣದಲ್ಲಿ, ವಿವಾಹಿತರಾಗಿ ಗೃಹಕೃತ್ಯಗಳನ್ನು ದಕ್ಷತೆಯಿಂದ ನಿರ್ವಹಿಸುತ್ತಿರುವ ಪಾಶ್ಚಾತ್ಯ ಮಹಿಳೆಯರ ಮೇಲ್ಪಂಕ್ತಿಯನ್ನು ನಮ್ಮವರು ಅನುಕರಿಸುವುದು ಉತ್ತಮ.

ನಮ್ಮ ಸ್ತ್ರೀಯರು ಆದರ್ಶ ಮಾತೆಯರಾಗಿ ಚೆನ್ನಾಗಿ ಸಂಸಾರ ಮಾಡಿಕೊಂಡಿರುವ ಯೋಗ್ಯತೆಯನ್ನು ಪಡೆಯಬೇಕೆಂಬ ಉದ್ದೇಶದಿಂದಲೇ ಪ್ರೊ|| ಕರ್ವೆಯವರು ಮಹಿಳಾ ವಿದ್ಯಾಪೀಠವನ್ನು ಸ್ಥಾಪಿಸಿದುದು. ನಮ್ಮ ದೇಶದ ಈಗಿನ ಪರಿಸ್ಥಿತಿಗೆ ಇಂತಹ ಸಂಸ್ಥೆಗಳು ಬಹಳ ಆವಶ್ಯಕ. ಆದರೆ ವಿದ್ಯಾವಂತರೆನಿಸಿದವರು ಆ ಸಂಸ್ಥೆಯ ವಿಷಯದಲ್ಲಿ ಅಸಡ್ಡೆಯಿಂದಿರುವುದು ಬಹಳ ಶೋಚನೀಯವಾಗಿದೆ. ಬಡಕುಟುಂಬಿಗಳು ಮಾತ್ರ ಈ ಹೊಸಮಾದರಿಯ ಶಾಲೆಯ ವ್ಯಾಸಂಗದಿಂದಲಾದರೂ ಲಾಭವಾಗಬಹುದೆಂಬ ಆಶೆಯಿಂದ ತಮ್ಮ ಮಕ್ಕಳನ್ನು ಇಲ್ಲಿಗೆ ಕಳುಹಿಸುತ್ತಿದ್ದಾರೆ. ಹೀಗಾಗಿ ಮದುವೆ ಮಾಡಿಕೊಂಡು ಸುಖವಾಗಿರಬೇಕೆಂದು ಆಶೆಪಡುವ ಹೆಣ್ಣುಮಕ್ಕಳನ್ನೂ ಸಹ ಹೊರಗಿನ ನೌಕರಿಯ ದಾಸ್ಯಕ್ಕೆ ಈಡುಮಾಡಿ, ಅವರನ್ನು, ಪಾಪ, ಐಹಿಕಸುಖದಿಂದಲೂ, ಆಧ್ಯಾತ್ಮಿಕ ಸಂಪತ್ತಿನಿಂದಲೂ ವಂಚಿತರನ್ನಾಗಿ ಮಾಡುತ್ತಿದ್ದಾರೆ. ನಿಜವಾಗಿಯೂ ಹೆಂಗುಸರಿಗೆ ಕುಟುಂಬಜೀವನಕ್ಕಿಂತ ಹೊರಗಿನ ನೌಕರಿಯಲ್ಲಿ ದಾಸ್ಯವು

ಹೆಚ್ಚು. ಹೆಂಗುಸರು ಹಣದ ದಾಸ್ಯಕ್ಕಿಂತ ಪ್ರೇಮದ ದಾಸ್ಯವನ್ನೇ ಏಕೆ ಒಪ್ಪಿಕೊಳ್ಳಬಾರದು? ಸ್ತ್ರೀಧರ್ಮಕ್ಕೆ ಸಹಜವಾದ ಕರ್ತವ್ಯಪಾಲನೆಗಿಂತಲೂ ಆರ್ಥಿಕಸ್ವಾತಂತ್ರ್ಯದ ಆಕಾಂಕ್ಷೆಯು ಬಹಳ ಕೀಳಾದುದು.

ಹೆಂಗುಸರು ಮನೆಯಲ್ಲಿಯೇ ಕೆಲವು ಕೈಕೆಲಸಗಳನ್ನು ಮಾಡಿಕೊಳ್ಳಬೇಕು. ಮದುವೆಯಾದವರು ಉಪಾಧ್ಯಾಯಿನಿಯರಾಗಿಯೂ, ಡಾಕ್ಟರುಗಳಾಗಿಯೂ, ನರ್ಸ್‌ಗಳಾಗಿಯೂ ಇರಕೂಡದೆಂಬ ಅಡ್ಡಿಯೇನೂ ಇಲ್ಲ. ಅಂಥವರು ಈ ಕೆಲಸಗಳನ್ನು ಕೈಕೊಂಡಲ್ಲಿ ಅವರಿಗೆ ಮತ್ತಷ್ಟು ಸೌಖ್ಯವಿರಬಹುದು. ಹಳ್ಳಿಗಳಲ್ಲಿಯೂ, ಪಟ್ಟಣಗಳಲ್ಲಿಯೂ ವಿದ್ಯಾವಂತರಾಗಿ ವಿವಾಹಿತರಾಗಿರುವವರು ಅವಿವಾಹಿತ ವಿದ್ಯಾವಂತರಿಗಿಂತಲೂ ಹೆಚ್ಚು ಸುಖಸಂತೋಷಗಳಿಂದ ಇರುವರು. ಅವಿವಾಹಿತ ಸ್ತ್ರೀಯರು ಎಷ್ಟೋ ನಿಂದೆಗಳನ್ನೂ, ಆಕ್ಷೇಪಣೆಗಳನ್ನೂ ಕೇಳಬೇಕಾಗಿದೆ. ಅವುಗಳನ್ನು ತಪ್ಪಿಸಿಕೊಳ್ಳಲು ಮದುವೆಯಾಗುವುದೇ ಸುಲಭವಾದ ಮಾರ್ಗ. ಒಂದುವೇಳೆ ಕೆಲವು ಸ್ತ್ರೀಯರು ಆಜೀವವೂ ಮದುವೆಯಾಗದೆ ಪರೋಪಕಾರದಲ್ಲಿಯೇ ಕಾಲ ಕಳೆಯಬೇಕೆಂಬ ಕಲ್ಪನೆಯುಳ್ಳವರಾಗಿದ್ದರೆ ಅಂಥವರು ತಮ್ಮ ನೆಂಟರ ಜತೆಯಲ್ಲಿದ್ದುಕೊಂಡು ಶುದ್ಧ ಮನಸ್ಕರಾಗಿ ಸೇವೆ ಮಾಡಬೇಕು.

ನಮ್ಮ ದೇಶದಲ್ಲಿ ಅಲ್ಲಲ್ಲಿ ಮಹಿಳಾ ವಿದ್ಯಾಪೀಠಗಳು ಶಾಶ್ವತವಾಗಿ ನಡೆಯಬೇಕಾದರೆ ಅದಕ್ಕಾಗಿ ಎಷ್ಟೋ ಕೆಲಸಗಳು ಆಗಬೇಕಾಗಿವೆ. ಪ್ರತಿವರ್ಷವೂ ಅಖಿಲಭಾರತ ಮಹಿಳಾ ಸಮ್ಮೇಳನದವರು ಮಹಿಳೆಯರಿಗೆ ಪ್ರತ್ಯೇಕವಾದ ವಿದ್ಯಾಭ್ಯಾಸ ಪದ್ಧತಿಗಳಿರಬೇಕೆಂಬ ಠರಾವುಗಳನ್ನು ಮಾಡುತ್ತಲೇ ಇದ್ದಾರೆ. ಇದರಿಂದ ಜನರ ಅಭಿಪ್ರಾಯಗಳು ಹೇಗೆ ರೂಪಗೊಳ್ಳುತ್ತಿವೆಯೆಂಬುದು ಸ್ಪಷ್ಟವಾಗುತ್ತದೆ. ಮಹಿಳಾ ವಿದ್ಯಾಪೀಠಗಳನ್ನು ಶಾಶ್ವತಗೊಳಿಸುವುದೇ ಪ್ರೊ|| ಕರ್ವೆಯವರಿಗೆ ನಮ್ಮ ಗೌರವದ ಕಾಣಿಕೆ. ಅದಕ್ಕಾಗಿ ಭಾರತದ ಸೋದರ ಸೋದರಿಯರೆಲ್ಲರೂ ಒಂದೇ ಮನಸ್ಸಿನಿಂದ ಸ್ತ್ರೀವಿದ್ಯಾಭಿವೃದ್ಧಿಯ ಕಾರ್ಯವನ್ನು ರಾಷ್ಟ್ರೀಯ ಚಳುವಳಿಯನ್ನಾಗಿ ಕೈಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ.

---

# ಅನುಕ್ರಮಣಿಕೆ

ಸತ್ಯಶೋಧನೆ

ಅಥವಾ

ಗಾಂಧೀಜಿ

ಯವರ

ಆತ್ಮಕಥೆ



ಐದು ಭಾಗಗಳ

ಒಟ್ಟು ಬೆಲೆ

ರೂ. ೫

'ಅನಾಸಕ್ತಿ

ಯೋಗ'ದ

ಪ್ರತಿಯೊಡನೆ

ಮದರಾಸು ಆಧಿಪತ್ಯದ ಮುಖ್ಯ ಮಂತ್ರಿಗಳಾಗಿದ್ದ

**ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರ**

—ಗ್ರಂಥಗಳು—

ಉಪನಿಷತ್ಕಾಲದ ಅಮೌಲ್ಯ ಖನಿಯನ್ನು ಸಂಶೋಧಿಸಿ
ಚಿಕ್ಕವರಿಗೂ ಅರ್ಥವಾಗುವಂತಹ ಸರಳ ಶೈಲಿಯಲ್ಲಿ ಸ್ವಾರಸ್ಯವಾಗಿ
ಬರೆದಿರುವ

## ಉಪನಿಷತ್ತಿನ ಕಥೆಗಳು

ಬೆಲೆ: ಆರಾಣೆ.

---

ಭಗವದ್ಗೀತೆಯ ಮುಖ್ಯವಾದ ಶ್ಲೋಕಗಳು, ಅವುಗಳ ತಾತ್ಪರ್ಯ
ಸಾರವತ್ತಾದ ವಿಷಯಗಳಿಂದ ಕೂಡಿರುವ

## ಶ್ರೀ ಕೃಷ್ಣನು ತೋರಿಸಿದ ದಾರಿ

ಬೆಲೆ: ಹನ್ನೆರಡಾಣೆ.

---

ಕರ್ನಾಟಕದ ಸುಪ್ರಸಿದ್ಧ ಕಥನಕಲೋಪಾಸಕರಾದ
ಶ್ರೀ **'ಆನಂದ'**ರ ನಾಲ್ಕು ಸೊಗಸಾದ ಕಥೆಗಳ ಸಂಗ್ರಹ

## — ಚಂದ್ರಗ್ರಹಣ —

ಬೆಲೆ: ಹತ್ತಾಣೆ.

---


ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ನಗರ